॥ ಓಂ ॥



ಶ್ರೀ ಜಗನ್ನಾಥದಾಸರಾಯರಿಂದ ವಿರಚಿತ

# ಫಲವಿದು ಬಾಳ್ದುದಕೆ

( ಅಣು ಶ್ರೀಹರಿಕಥಾಮೃತಸಾರ )

ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲ ಸಂಜಾತ

ಶ್ರೀಮತ್ಸಂಕರ್ಷಣ ಒಡೆಯರವರ

**ಕನ್ನಡ ವ್ಯಾಖ್ಯಾನ ಸಹಿತ**



ಜಲಜೇಷ್ಟನಿಭಾಕಾರಂ ಜಗದೀಶಪದಾಶ್ರಯಮ್ ।

ಜಗತೀತಲ ವಿಖ್ಯಾತಂ ಜಗನ್ನಾಥಗುರುಂ ಭಜೇ ॥



ಶ್ರೀ ಜಗನ್ನಾಥದಾಸರಾಯ ವಿರಚಿತ

# ಫಲವಿದು ಬಾಳ್ದುದಕೆ

(ಅಣು ಶ್ರೀಹರಿಕಥಾಮೃತಸಾರ)

ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲಸಂಜಾತ

ಶ್ರೀಮತ್ಸಂಕರ್ಷಣ ಒಡೆಯರವರ ಕನ್ನಡ ವ್ಯಾಖ್ಯಾನ ಸಹಿತ



ಶ್ರೀಹರಿವಿಠ್ಠಲ ಪ್ರಕಾಶನ

ನಂ. 2/3, ಮೊದಲನೆಯ ಮುಖ್ಯ ರಸ್ತೆ,

ನರಸಿಂಹರಾಜಕಾಲೋನಿ, ಬೆಂಗಳೂರು-560019

ದೂರವಾಣಿ : 603412 – 628182

PHALAVIDU BALDUDAKE, Published by Sri Harivittala Prakashana, No. 2-3, First Main Road, Narasimharaja Colony, Bangalore-560019.

Pages: viii+80

ಪ್ರಥಮ ಮುದ್ರಣ ೧೦೦೩ ಪ್ರತಿಗಳು

20=00

ಸಮರ್ಪಣೆ

ಶ್ರೀ ಪ್ರಮೋದನಾಮ ಸಂವತ್ಸರದ ಕಾರ್ತೀಕ ಶುದ್ಧ ನವಮಿ (ತಾ॥ 29-10-90)
ಶನಿವಾರ ಶ್ರೀ ವಿಜಯದಾಸರ ಆರಾಧನೆ

ಬೆಲೆ ; ಉತ್ತಮಪ್ರತಿ
ಸಾದಾಪ್ರತಿ

# ಅರ್ಪಣೆ



ಶ್ರೀ ಜಗನ್ನಾಥದಾಸರಾಯರ ಪರಮಗುರುಗಳಾದ
ಶ್ರೀ ವಿಜಯದಾಸರ ಉಪಾಸನಾಮೂರ್ತಿಯಾದ
ಶ್ರೀವಿಜಯವಿಠ್ಠಲ ದೇವರ
ದಿವ್ಯಪಾದ ಪದುಮಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

ಹರಿಯ ತಿಳಿದವನು ಅವನು ಜ್ಞಾನಿಯೇ ನೋಡಾ ।
ಹರಿಯಾ ತಿಳಿದವ ಪೂರ್ಣ ಅವನು ಜ್ಞಾನಿಯೇ ನೋಡಾ ।
ಹರಿಯನರಿಯದವ ಅವನು ಒಬ್ಬ ಜ್ಞಾನಿಯೇ ।
ಹರಿಯ ಬಲ್ಲೆನೆಂದವ ಅವನು ಜ್ಞಾನಿಯೇ ।
ಹರಿಯೇ ಸರ್ವಚೇಷ್ಟಪ್ರದ ಗೋಪಾಲವಿಠ್ಠಲ ನರ-
ಹರಿ ಎಂದರಿದವನು ನರನೆ ನರನೆ ನರನೆ ನೋಡಾ ॥
(ಶ್ರೀ ಗೋಪಾಲದಾಸರ ಸುಳಾದಿ)

# ಪ್ರಕಾಶಕರ ಸವಿನುಡಿ

'ಫಲವಿದು ಬಾಳ್ದುದಕೆ' ಎಂಬ ಶ್ರೀಜಗನ್ನಾಥದಾಸರಾಯರ ೨೭ (ಇಪ್ಪತ್ತೇಳು) ನುಡಿಗಳ ಈ ಕೃತಿಗೆ ಹಲವಾರು ವ್ಯಾಖ್ಯಾನ ಟಿಪ್ಪಣಿಗಳು ಈವರೆಗೆ ಪ್ರಕಟವಾಗಿದೆ. ಆದರೆ ಪ್ರಕೃತದ ಈ ವ್ಯಾಖ್ಯಾನವು ಇದುವರೆಗೂ ಪ್ರಕಟವಾಗಿಲ್ಲ ವೆಂದು ತಿಳಿಯುತ್ತೇವೆ. "ಫಲವಿದು ಬಾಳ್ದುದಕೆ" ಎಂಬ ಈ ಕೃತಿಗೆ 'ಅಣು ಹರಿಕಥಾಮೃತಸಾರ' ಎಂದು ಕರೆಯುವ ವಾಡಿಕೆ ಇದೆ. ಈ ವ್ಯಾಖ್ಯಾನದ ಭಾಷೆ ಮತ್ತು ಶೈಲಿಯನ್ನು ನೋಡಿದರೆ ಇದು ಶ್ರೀ ಸಂಕರ್ಷಣ ಒಡೆಯರವರು ಬರೆದಿರ ಬೇಕೆಂದು ಊಹಿಸಬಹುದು. ಯಾಕೆಂದರೆ ಶ್ರೀಹರಿಕಥಾಮೃತಸಾರಕ್ಕೆ ಇವರು ಬರೆದಿರುವ ವ್ಯಾಖ್ಯಾನದ ಭಾಷೆ ಮತ್ತು ಶೈಲಿಯು ಈ ವ್ಯಾಖ್ಯಾನದ ಜೊತೆಗೆ ಬಹಳ ವಾಗಿ ಹೋಲುತ್ತದೆ. ಆದರೆ ಇದರ ಆರಂಭದಲ್ಲಿಯಾಗಲೀ, ಕೊನೆಯಲ್ಲಿ ಯಾಗಲೀ ಅವರ ಹೆಸರಿನ ಸೂಚನೆ ಇಲ್ಲ. ೧೯ನೆಯ ಶತಮಾನದ ಮಧ್ಯಭಾಗ ದಲ್ಲಿ ಈ ವ್ಯಾಖ್ಯಾನವು ರಚಿತವಾಗಿರಬೇಕು. ಈ ವ್ಯಾಖ್ಯಾನಕಾರರು ಆ ಕಾಲದ ಗೂಢಕರ್ತೃ ಎಂದು ಮಾತ್ರ ಹೇಳಬಹುದು. ಇಲ್ಲಿ ವ್ಯಾಖ್ಯಾನಕಾರರು ಗ್ರಹಿಸಿದ ನುಡಿಗಳ ಸಂಖ್ಯೆಯ ಕ್ರಮ, ಮತ್ತು ನುಡಿಗಳಲ್ಲಿಯ ಪಾಠಭೇದಗಳನ್ನು ನೋಡಿ ದರೆ ಆ ಕಾಲಕ್ಕೇನೇ ಈ ಕೃತಿ ಬಹು ವ್ಯತ್ಯಾಸಗೊಂಡಿರುವುದು ಸ್ಪಷ್ಟವಾಗಿದೆ.

ಹೈದರಾಬಾದಿನಲ್ಲಿರುವ ನಮ್ಮ ಮಿತ್ರರಾದ ವಿ. ಆರ್. ನಾಗರಹಳ್ಳಿಯವರು ತಮ್ಮಲ್ಲಿ ಬಹಳ ವರ್ಷಗಳಿಂದಲೂ ಇದ್ದ ಈ ವ್ಯಾಖ್ಯಾನವನ್ನು ನಮಗೆ ತಂದು ಕೊಟ್ಟು ಮುದ್ರಣ ಮಾಡಿಸಿದರೆ ಅನೇಕರು ಈ ವ್ಯಾಖ್ಯಾನದ ಸವಿಯನ್ನು ಓದಿ ಆನಂದ ಪಡಬಹುದೆಂದು ಹೇಳಿದರು. ಅವರಿಗೆ ನಮ್ಮ ಗ್ರಾಹಕರ ಪರವಾಗಿಯೂ ಮತ್ತು ಪ್ರಕಾಶನದ ಪರವಾಗಿಯೂ ಕೃತಜ್ಞತೆಯನ್ನು ಮತ್ತು ಧನ್ಯವಾದವನ್ನೂ ಸಲ್ಲಿಸುತ್ತೇವೆ.

ನವವೃಂದಾವನದಲ್ಲಿ ೨೦-೨೨ ವರ್ಷ ಯತಿಗಳ ಸೇವೆ ಮಾಡಿಕೊಂಡಿದ್ದ ನಮ್ಮ ಮಿತ್ರರೂ ಮತ್ತು ಪೂಜ್ಯರೂ ಆದ ಮಾನ್ಯ ವಿಷ್ಣುತೀರ್ಥರು ಈ ವ್ಯಾಖ್ಯಾನ ವನ್ನು ಕೂಲಂಕುಷವಾಗಿ ಓದಿ ಮತ್ತು ಅದರಲ್ಲಿ ಬಂದಿದ್ದ ಅನೇಕ ಸಂಸ್ಕೃತ ಭಾಗ ವನ್ನು ತಿದ್ದಿ ಸರಿಪಡಿಸಿಕೊಟ್ಟಿದ್ದಾರೆ. ಹಾಗೆಯೇ ನಮ್ಮ ಮಿತ್ರರಾದ ಆನಂದ ಪ್ರೆಸ್ಸಿನ ಮಾಲೀಕರಾದ ಮಾನ್ಯ ಶ್ರೀಶಮೂರ್ತಿಯವರು ಮುದ್ರಣದ ಕರಡು ಪ್ರತಿ ಗಳನ್ನು ತಮ್ಮ ಕೆಲಸ ಎಷ್ಟೇ ಇದ್ದರೂ ಕೂಡ ದಾಸರಾಯರ ಸೇವೆಯೆಂದು ನೋಡಿ

ಚೆನ್ನಾಗಿ ತಿದ್ದಿ ಕೊಟ್ಟಿದ್ದಾರೆ. ಅವರ ಶ್ರಮಕ್ಕೆ ನಾವು ಋಣಿಯಾಗಿದ್ದೇವೆ. ಇವರಿಬ್ಬರಿಗೂ ಶ್ರೀವಿಜಯವಿಠ್ಠಲದೇವರು ಆಯುರಾರೋಗ್ಯ ಐಶ್ವರ್ಯ, ಮತ್ತು ಜ್ಞಾನ ಭಕ್ತಿವೈರಾಗ್ಯ ದಯಪಾಲಿಸೆಂದು ನಾವು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಮೊದಲನೆ ೪೦ ಪುಟಗಳನ್ನು ಶ್ರೀಶಾರದ ಪ್ರಿಂಟಿಂಗ್ ಪ್ರೆಸ್ಸಿನಲ್ಲಿಯೂ ಉಳಿದ ಪುಟಗಳನ್ನು ಶಿಲ್ಪ ಪ್ರಿಂಟಿಂಗ್ ಪ್ರೆಸ್ಸಿನಲ್ಲಿಯೂ ಮುದ್ರಿಸಲಾಗಿದೆ. ಕೊನೆಯ ೬೦ ಪುಟಗಳನ್ನು ಅತಿ ಶೀಘ್ರವಾಗಿ ಮುದ್ರಣಮಾಡಿಕೊಡುವುದಕ್ಕೆ ಸಹಾಯಮಾಡಿದ ಬೃಂದಾವನ ಪ್ರೆಸ್ಸಿನ ದೇಸಾಯಿಯವರಿಗೆ ನಮ್ಮ ಕೃತಜ್ಞತೆಗಳು.

ಶ್ರೀ ಸಂಕರ್ಷಣ ಒಡೆಯರವರ ವ್ಯಾಖ್ಯಾನದ ಜೊತೆಗೆ ಇನ್ನಿಬ್ಬರ ವ್ಯಾಖ್ಯಾನದ ಸಾರಾಂಶವನ್ನು (ಗು) ಮತ್ತು (ಭೀ) ಎಂಬ ಗುರುತಿನಿಂದ ಕೊಟ್ಟಿದ್ದೇವೆ.

ಸಜ್ಜನರಾದ ನಮ್ಮ ಗ್ರಾಹಕರು ಈ ಕಿರುಹೊತ್ತಿಗೆಯನ್ನು ಹಿಂದಿನಂತೆಯೇ ಪ್ರೋತ್ಸಾಹಿಸುವರೆಂದು ನಂಬಿದ್ದೇವೆ.

ಈ ಹಸ್ತಪ್ರತಿಯ ಆವೃತ್ತಿಗಳ ಲೇಖನರೂಪ ಶ್ರೀಹರಿಯ ಪೂಜಾಕೃತಿಯು, ಅಸ್ಮದ್ಗುರ್ವಂತರ್ಗತ ಶ್ರೀ ಜಗನ್ನಾಥದಾಸರಾಯರ ಅಂತರ್ಗತ ಮನುನಾಮಕ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಅನಿರುದ್ಧಾದಿ ಚತುರ್ಮೂರ್ತ್ಯಭಿನ್ನ ಬಿಂಬರೂಪಾಭಿನ್ನ ಶ್ರೀಕೃಷ್ಣಾರ್ಪಣಮಸ್ತು.

# ಅಭಿಪ್ರಾಯ

'ಫಲವಿದು ಬಾಳ್ದುದಕೆ' ಎಂಬ ಪಲ್ಲವಿಯ ಇಪ್ಪತ್ತೇಳು ನುಡಿಗಳ ಒಂದು ದೇವರನಾಮವನ್ನು ಸುಪ್ರಸಿದ್ಧ ಶ್ರೀ ಜಗನ್ನಾಥದಾಸರು ರಚಿಸಿದ್ದಾರೆ. ಇದು ಮೇಲೆ ನೋಡಲು ಸರಳವಾದ ಕೃತಿಯಂತೆ ಕಂಡರೂ ಪ್ರಮೇಯಪುಂಜವೂ, ತತ್ವ ಪರಿಪ್ಲುತವೂ ಅರ್ಥಗರ್ಭಿತವೂ ಆದ ಕೃತಿ.

ದ್ವೈತದರ್ಶನದ ಬೆಳಕಿನಲ್ಲಿ ಮಾನವರ ಕರ್ತವ್ಯವನ್ನು ಘೋಷಿಸುವ ಸಂದೇಶಾತ್ಮಕ ಕೃತಿಯಿದು. ಅರ್ಥವಾಗುವುದು ಸುಲಭವಲ್ಲ. ಆಳಕ್ಕೆ ಇಳಿದು ಅರ್ಥ ಮಾಡಬೇಕಾದರೆ ವಿದ್ವತ್ತು ಅಗತ್ಯ. ಅವರ ಇತರ ಕೃತಿಗಳಂತೆ ವ್ಯಾಖ್ಯಾನ ಸಾಪೇಕ್ಷ ವಾದ ಕೃತಿ.

ಶ್ರೀಹರಿಕಥಾಮೃತಸಾರಕ್ಕೆ ದಿವ್ಯವಾದ ವ್ಯಾಖ್ಯಾನವನ್ನು ಮಾಡಿ-ಕೊಟ್ಟಿರುವ ಶ್ರೀ ಸಂಕರ್ಷಣ ಒಡೆಯರದು ಎನ್ನಲಾದ ವ್ಯಾಖ್ಯಾನವೊಂದು ಈಗ ಪ್ರಕಟವಾಗುತ್ತಲಿದೆ. ಗ್ರಂಥಗರ್ಭದಲ್ಲೆಲ್ಲೂ ವ್ಯಾಖ್ಯಾತೃಗಳ ಹೆಸರು ಕಂಡು ಬರುವುದಿಲ್ಲವಾದರೂ ಸಂಕರ್ಷಣ ಒಡೆಯರ ವಿಶಿಷ್ಟ ಶೈಲಿ ಇಲ್ಲಿ ಕಾಣುತ್ತದೆ. ಅದೇ ಸಂಭಾಷಣಾತ್ಮಕ ಆಳವಾದ ಪ್ರಮೇಯಾತ್ಮಕವಾದ ಶೈಲಿ ಇಲ್ಲಿದೆ. ಅವರ ಶೈಲಿಯ ಪರಿಚಯವಿರುವವರು ಯಾರಾದರೂ ಅದನ್ನು ಇಲ್ಲಿ ಗುರುತು ಹಿಡಿಯುವ ಹಾಗಿದೆ, ಉದಾಹರಣೆಗೆ ೧೨ನೆಯ ನುಡಿಯಲ್ಲಿ ಬರುವ 'ಇಂಧನಗತ' ಶಬ್ದಕ್ಕೆ ಮಾಡಿರುವ ವ್ಯಾಖ್ಯಾನವನ್ನು ನೋಡಬಹುದು. ೧೪ನೆಯ ನುಡಿಯಲ್ಲಿ ಬರುವ 'ಪರಮಾಣು' ಶಬ್ದಕ್ಕೆ ಅರ್ಥ; ೧೫ ನೆಯ ನುಡಿಯ ವಿವರಣೆಯೊಂದಿಗೆ ಕೊಟ್ಟಿರುವ ಗಾಯಿತ್ರೀ ಜಪದಿಂದ ಪರಿಹಾರವಾಗುವ ಪಾಪಗಳ ಪಟ್ಟಿ ಇವು ಸಂಕರ್ಷಣ ಒಡೆಯರ ವಿಶಿಷ್ಟ ರೀತಿಯದಾಗಿದೆ.

ಹೀಗೆ ಪ್ರಕಟವಾಗಲಿರುವ ಈ ವ್ಯಾಖ್ಯಾನ ಜ್ಞಾನಪ್ರದವಾಗಿದ್ದು ಸಜ್ಜನರಿಗೆ ಪರಮ ಪ್ರಯೋಜನವಾಗಿದೆ ಎಂಬುವುದರಲ್ಲಿ ಸಂದೇಹವಿಲ್ಲ.

ಪ್ರಕಾಶಕರು ಅಭಿನಂದನಾರ್ಹರು

ಡಾ|| ಕೆ. ಎಮ್. ಕೃಷ್ಣರಾವ್
ನಿವೃತ್ತ ಕನ್ನಡ ಪ್ರಾಧ್ಯಾಪಕರು
ಉಸ್ಮಾನಿಯ ವಿಶ್ವವಿದ್ಯಾಲಯ, ಹೈದರಾಬಾದ್.

ಬೆಂಗಳೂರು-10
2-3-1990

# ಶ್ರೀ ಜಗನ್ನಾಥದಾಸರ ಕೀರ್ತನೆ

ರಾಗ : ಮೋಹನ ತಾಳ : ಅಟ್ಟ

ಗೋಪಾಲ ದಾಸರಾಯ ನಿನ್ನಯ ಪಾದ
ನಾ ಪೊಂದಿದೆನೊ ನಿಶ್ಚಯ ॥ ಪ ॥

ಈ ಪೀಡಿಸುವ ತ್ರಯತಾಪಗಳೋಡಿಸಿ
ಕೈ ಪಿಡಿದೆನ್ನ ಕಾಪಾಡಿದ ಗುರುರಾಯ ॥ ಅ ॥

ಘೋರ ವ್ಯಾಧಿಯನೆ ನೋಡಿ ವಿಜಯರಾಯ
ಭೂರಿ ಕರುಣವ ಮಾಡಿ
ತೋರಿದರಿವರೆ ಉದ್ಧಾರಕರೆಂದಂದಿ
ನಾರಭ್ಯ ತವ ಪಾದ ಸಾರಿದೆ ಸಲಹೆಂದು ॥

ಸೂರಿಜನ ಸಂಪ್ರೀಯ ಸುಗುಣೋದಾರ
ದುರುಳನ ದೋಷ ನಿಚಯವ
ದೂರಗೈಸಿ ದಯಾಂಬುನಿಧೆ ನಿ
ವಾರಿಸಿದೆ ಕರಪಿಡಿದು ಕರುಣದಿ ॥ ೧ ॥

ಅಪಮೃತ್ಯುವನು ತರಿದೆ ಎನ್ನೊಳಗಿದ್ದ
ಅಪರಾಧಗಳ ಮರೆದೆ
ಚಪಲ ಚಿತ್ತನಿಗೊಲಿದು ವಿಪುಲ ಮತಿಯನಿತ್ತು
ನಿಪುಣನೆಂದೆನಿಸಿದೆ ತಪಸಿಗಳಿಂದಲಿ

ಕೃಪಣ ವತ್ಸಲ ನಿನ್ನ ಕರುಣೆಗೆ
ಉಪಮೆಗಾಣೆನೊ ಸಂತತವು ಕಾ
ಶ್ಯಪಿಯೊಳಗೆ ಬುಧರಿಂದ ಜಗದಾ
ಧಿಪ ಕಿಂಕರನೆನಿಸಿ ಮೆರೆಯುವ ॥ ೨ ॥

ಎನ್ನ ಪಾಲಿಸಿದಂದದಿ ಸಕಲ ಪ್ರ
ಪನ್ನರ ಸಲಹೊ ಮೋದಿ
ಅನ್ಯರಿಗೀಪರಿ ಬಿನ್ನಪ ಗೈಯೆ ಜ
ಗನ್ನಾಥವಿಠ್ಠಲನ ಸನ್ನುತಿಸುವ ಧೀರ ॥

ನಿನ್ನ ನಂಬಿದ ಜನರಿಗೆಲ್ಲಿಯು
ಬನ್ನವೋ ಭಕ್ತಾನುಕಂಪಿ ಶ
ರಣ್ಯ ಬಂದೆನೊ ಈ ಸಮಯದಿ ಅ
ಹರ್ನಿಶಿ ಧ್ಯಾನಿಸುವೆ ನಿನ್ನನು ॥ ೩ ॥

ಓಂ

॥ ಓಂ ಶ್ರೀ ಗುರುಭ್ಯೋ ನಮಃ,   ಹರಿ ಓಂ ॥

# ಶ್ರೀ ಜಗನ್ನಾಥದಾಸರಾಯರಿಂದ ವಿರಚಿತ

# 'ಫಲವಿದು ಬಾಳ್ದುದಕೆ'

## ಶ್ರೀಮತ್ಸತ್ಯಪರಾಯಣತೀರ್ಥ ಕರಕಮಲಸಂಜಾತ

## ಶ್ರೀಮತ್ಸಂಕರ್ಷಣ ಒಡೆಯರವರ

### ಕನ್ನಡ ವ್ಯಾಖ್ಯಾನ

ರಾಗ : ಪಂತುವರಾಳಿ          ತಾಳ : ಆದಿ

**ಫಲವಿದು ಬಾಳ್ದುದಕೆ ಸಿರಿ** ||ಪ||

**ನಿಲಯನ ಗುಣಗಳ ತಿಳಿದು ಭಜಿಸು(ವದೆ)ವುದೆ** ||ಅ.ಪ||

**ಫಲವಿದು** — ಬದುಕಿದ್ದಕ್ಕೆ ಫಲ ದಾವುದೆಂದರೆ, ದಾರಾಪುತ್ರಾದಿಗಳಿಂದ, ಐಶ್ವರ್ಯಗಳಿಂದ, ಅಹಂ ಮಮಕಾರಗಳಿಂದ ಯುಕ್ತನಾಗಿ ಐಹಿಕಗಳ ಭೋಗ ಮಾಡಿ ಪರಲೋಕದ ಜ್ಞಾನವಿಲ್ಲದೇ ಬಾಳೋಣ ದಾವದದೆ ಇದು ಫಲವಲ್ಲ, ಇನ್ನು ಬದುಕಿದ್ದಕ್ಕೆ ಫಲ ಆಶ್ರಯ ದಾವದೆಂದರೆ, **ಸಿರಿ-ನಿಲಯನ** — **ಸಿರಿ** – ಲಕ್ಷ್ಮೀ-ದೇವೇರಿಗೆ. **ನಿಲಯನ**—ಆವಾಸಕ್ಕೆ ಯೋಗ್ಯವಾದ ಆಲಯಸ್ಥಾನಾಪನ್ನನಾದವ, ಅಂದರೆ ಲಕ್ಷ್ಮೀದೇವೇರಿಗೆ ಆವಾಸಕ್ಕೆ ಯೋಗ್ಯವಾದ ವಕ್ಷಸ್ಥಳ ಉಳ್ಳವ ಮತ್ತು ಲಕ್ಷ್ಮೀದೇವೇರಿಗೆ ಅವರ ಅಂತರ್ಗತನಾದವ. ಲಕ್ಷ್ಮೀದೇವೇರೇ ಗೃಹಸ್ಥಾನಾಪನ್ನ-ರಾಗಿರುವ ನಿಲಯ. ಹಾಗಾದರೆ ಹರಿ ಬ್ರಹ್ಮಾಂತರ್ಗತನಲ್ಲವಾ ಎಂದರೆ, ಬ್ರಹ್ಮ ದೇವರು ಹರಿಯನ್ನು ಲಕ್ಷ್ಮೀಗೋಳಕಾಂತರ್ಗತನಾಗಿಯೇ ಉಪಾಸನೆ ಮಾಡಬೇಕು, ಆದರೆ ಲಕ್ಷ್ಮೀಗೆ ಉಪಾಸನಕ್ಕೆ ಅಂತರ್ಗತನು ಬೇರೆ ಇಲ್ಲ, ಸಾಕ್ಷಾತ್ತಾಗಿ ಉಪಾಸನಾಧಿ ಕಾರಳು ಮತ್ತು ಶ್ರೀವತ್ಸ ಸಾಂಕೇತದಿಂದ ಲಕ್ಷ್ಮೀ ಏಕದೇಶ (ದೇಹ) ಸ್ಥಳ ಎಂತಲೂ ತಾತ್ಪರ್ಯ. ಲಕ್ಷ್ಮೀ ಅಂತರ್ಗತತ್ವ... (ದೇವರಿಂದ) ಲಕ್ಷ್ಮೀ ಅಸ್ವತಂತ್ರ ಚೇತನ ಳೆಂತಲೂ, ಅಸ್ವತಂತ್ರರಾದ ಬ್ರಹ್ಮಾದಿ ತೃಣಾಂತ ತ್ರಿವಿಧ ಚೇತನರಿಗೆ, ಲಕ್ಷ್ಮೀಗೆ ಪರಮಾತ್ಮನಾದ ತಾನೂನೂ, ಆ ಲಕ್ಷ್ಮೀದ್ವಾರಾ ಬ್ರಹ್ಮಗೂ, ಬ್ರಹ್ಮನದ್ವಾರಾ, ರುದ್ರದೇವರಿಗೂ, ಈ ಪ್ರಕಾರ ಪರಂಪರಯಾ ಸ್ವೋತ್ತಮರದ್ವಾರಾ ಸ್ವಾವರರಿಗೆ ನಿಯಾಮಕ ಎಂತಲೂನೂ ತಾತ್ಪರ್ಯ. ಪರಮಾತ್ಮ ಲಕ್ಷ್ಮೀಗೆ ನಿಯಾಮಕ ಎಂದು ಹೇಳೋಣದರಿಂದ ಲಕ್ಷ್ಮೀದೇವೇರು ಪರಮಾತ್ಮಗೆ ಅಸಮಳು ಎಂತಲೂ ತಾತ್ಪರ್ಯ. ಪರಮಾತ್ಮಗೆ ಅನ್ಯನಿಯಾಮಕರಿಲ್ಲವಾದ್ದರಿಂದ ಸರ್ವೋತ್ತಮ, ಸಮಅಧಿಕ ಶೂನ್ಯ ನಾದವನು ಪರಮಾತ್ಮನೆಂತಲೂ ತಾತ್ಪರ್ಯ ಮತ್ತು ವೈಕುಂಠದ ಶುದ್ಧ "ಶ್ರೀಭಾಗ" ದಲ್ಲಿ ರಮಾದೇವೇರು ಅಂತಲೂ, ಬಹು ಭಾಗಗಳಾಗಿ ಸೇವಾ ಮಾಡುತಾ ಇರೋಣದ

ರಿಂದ ರಮಾದೇವೇರಿಂದ ಉತ್ತಮನೆಂತಲೂ ತಾತ್ಪರ್ಯ. ಮತ್ತು ರಮಾದೇವೇರಿಗೆ ಆಶ್ರಯ ಎಂಬೋಣದರಿಂದ "ರಮಾಖ್ಯ" ಭೋಗದ್ರವ್ಯಗಳಿಂದ ಭೋಗಸಾಪೇಕ್ಷಿತ ನಲ್ಲ, "ಸ್ವರಮಣ" ಎಂತಲೂ ತಾತ್ಪರ್ಯ. **ನಿಲಯನೆ** ಎಂಬೋಣದರಿಂದ ಏತಾದೃಶನಾದ ಸರ್ವೋತ್ತಮ ಎಂದರ್ಥ. ಇಂಥಾ ಸರ್ವೋತ್ತಮ "ಸರ್ವ" ಶಬ್ದ ವಾಚ್ಯನಾದವನು; ಇಂಥವನ **ಗುಣಗಳ ತಿಳಿದು** — ಎಂದರೆ ಸೃಷ್ಟಿ ಇತ್ಯಾದಿ ಅಷ್ಟವಿಧ ಏತಾದೃಶವಾದ, ಅನಂತಾನಂತವಾದ, ಲಕ್ಷ್ಮೀದೇವೇರಿಗೂ ಕೂಡ ಅಗೋಚರ (ಸಾಕಲ್ಯೇನ) ವಾದ ಗುಣಗಳ ಒಳಗೆ (ಅವನನ್ನು) **ತಿಳಿದು**, ತನಗೆ ಯೋಗ್ಯವಾದ ಗುಣಗಳನ್ನು ಗುರುದ್ವಾರ ತಿಳಿದು—(ಅಂದರೆ ತನ್ನ ಯೋಗ್ಯತೆಗೆ ಏಕಗುಣೋಪಾಸನವೋ, ಚತುರ್ಗುಣೋಪಾಸನವೋ) ಅವನ್ನು ತಿಳಿದು ಮತ್ತು ಐಹಿಕ ಭೋಗಾದಿಗಳೆಲ್ಲ ಅಸಾರ ಎಂತ ತಿಳಿದು ನಿಸ್ಸಂಗ, ನಿಷ್ಕಾಮುಕದಿಂದ ಇರೋಣವೇ ಭಗವತ್ಪ್ರೀತಿ ಎಂತ ತಿಳಿದು ಮಾಹಾತ್ಮ್ಯಪೂರ್ವಕ ಸುಧೃಢ ಸ್ನೇಹ ದಿಂದ ಪರಮಾತ್ಮನನ್ನು **ಭಜಿಸುವುದೇ**—ತನ್ನ ಹೃದಯಾಂತರ್ಗತನಾದ ಬಿಂಬನ್ನ ಸರ್ವದಾ ಆಶ್ರಯ ಮಾಡಿ ಅವನನ್ನೇ ನಂಬಿ ಅವನ ಗುಣಗಳ ಕೊಂಡಾಡುತ ಅಂತರ್ಗತದಲ್ಲಿ ಮನಸ್ಸಿನಿಂದ ಪೂಜಾದಿಗಳನ್ನು ಮಾಡುತಾ ಬದುಕಿ ಇರೋಣ ದಾವದದೆ ಅದೇ ಬದುಕಿದ್ದಕ್ಕೆ ಫಲ.

### ಸೃಷ್ಟ್ಯಾದಿ ಗುಣಗಳ ವರ್ಣನೆ

**ಸೃಷ್ಟಿ**—ಚರಾಚರ ಪ್ರಾಣಿಗಳಿಗೆ ಸ್ಥೂಲದೇಹಗಳಿಂದ ಸೃಷ್ಟಿ ಮಾಡತಕ್ಕವ. **ಸ್ಥಿತಿ**—ಸೃಷ್ಟಿ ಮಾಡಿದವರನ್ನು ಬ್ರಹ್ಮ ಪ್ರಳಯ ಪರ್ಯಂತ ಅವರವರಿಂದ ಸಾಧನೆ ಮಾಡಿ ಮಾಡಿಸಿ ಪಾಲನೆ ಮಾಡತಕ್ಕವ. **ಸಂಹಾರ**—ಪ್ರಳಯಕಾಲ ಪ್ರಾಪ್ತವಾಗುತ್ತಿರಲಿಕ್ಕೆ ಸರ್ವರ ಸ್ಥೂಲದೇಹಗಳ ನಾಶಮಾಡಿ, ತನ್ನ ಉದರದಲ್ಲಿ ಧರಿಸಿ ಲಕ್ಷ್ಮ್ಯಾತ್ಮಕ ಉದಕದಲ್ಲಿ ಶಯನ ಮಾಡತಕ್ಕವ. **ನಿಯಮನ** – ಅಂಭ್ರಣೀ ದೇವೇರ ಅಂತರ್ಗತನಾಗಿದ್ದು ಅವರಿಗೆ ನಿಯಮನ ಮಾಡಿ ಸ್ತೋತ್ರ ಕೈಕೊಂಡು ಸೃಷ್ಟಿಗೆ ಆರಂಭ ಮಾಡತಕ್ಕವ ಮತ್ತು ಸರ್ವಪ್ರಾಣಿಗಳಿಗೂ ನಿಯಾಮಕನಾದವನು. **ಜ್ಞಾನ** – ಮುಕ್ತಿಯೋಗ್ಯರಾದವರ ಸ್ವರೂಪಜ್ಞಾನ ಅಭಿವ್ಯಕ್ತಿಮಾಡತಕ್ಕವ. **ಅಜ್ಞಾನ**– ತಮೋಯೋಗ್ಯ, ನಿತ್ಯಸಂಸಾರಿಗಳ ಸ್ವರೂಪಭೂತವಾದ ಅಜ್ಞಾನ ವ್ಯಕ್ತಮಾಡಿಕೊಡತಕ್ಕವ. **ಬಂಧ** – ದೋಷಸ್ವರೂಪರಾದ ಕಲ್ಯಾದಿ ದೈತ್ಯರ "ನ ಚ ಪುನರಾವರ್ತತೇ" ಲೋಕವಾದ ಅಂಧಂತಮಸ್ಸೆಂಬ ಲೋಕದಲ್ಲಿ ಬಂಧನ ಮಾಡಿ ಇಡತಕ್ಕವ. **ಮೋಕ್ಷ** – ನಿರ್ದೋಷಸ್ವರೂಪರಾದ, ಮುಕ್ತಿಯೋಗ್ಯರಾದ ಸುಜೀವರನ್ನು ವೈಕುಂಠಲೋಕದಲ್ಲಿ ಇಡತಕ್ಕವ ಮತ್ತು ಜ್ಞಾನ ಕೊಡತಕ್ಕವ, ಅಜ್ಞಾನ ಕೊಡತಕ್ಕವ, ಬಂಧನದಲ್ಲಿಡತಕ್ಕವ, ಅದರ ಪರಿಹಾರ ಮಾಡತಕ್ಕವ ಮತ್ತು....ತ್ರಿವಿಧ ಸ್ವರೂಪದಂತೆ (ಅವರ) ಲಿಂಗದೇಹವನ್ನು ತ್ರಿವಿಧರಿಗೆ ಮೋಕ್ಷ....

ಮಾಡಿಸಿ ಸ್ವ ರೂ ಪ ಗ ತಿ ಗ ಳ ನ್ನ ಕೊಡತಕ್ಕವ ಎಂದು ಮುಂತಾಗಿ ತಿಳಿದು ಭಜಿಸೋಣವೇ "ಫಲವಿದು ಬಾಳ್ವುದಕೆ".

ಗಂರಂಶ್ರೀಶವಿಠ್ಠಲರ ಶಿಷ್ಯರಿಂದ ರಚಿತವಾದ ಟೀಕೆಯಿಂದ ಸಂಗ್ರಹ.

ಶ್ರೀಮದ್ಗುರುವರ ಶ್ರೀ ಗುರು ಜಗನ್ನಾಥದಾಸರಾಯ ಗುರುಗಳವರು ಪರಮಾನುಗ್ರಹದಿಂದ ಅಧಿಕಾರಿಗಳಾದ ಸಜ್ಜನರಿಗೆ ಸನ್ಮಾರ್ಗವನ್ನು ಉಪದೇಶ-ರೂಪವಾಗಿ ಪದರೂಪದಿಂದ ವಿರಚಿಸಿದ್ದಾರೆ. ಸತ್ವಾಧಿಕಾರಿಗಳಾದ ಮುಕ್ತಿಯೋಗ್ಯ ಜೀವರು ಶ್ರೀಹರಿವಾಯುಗಳ ಅನುಗ್ರಹದಿಂದ ವೈಷ್ಣವಜನುಮ ಬಂದುದಕ್ಕೆ ಸಾರ್ಥಕ ದಾವುದೆಂದರೆ "ಫಲವಿದು ಬಾಳ್ವುದಕೆ". ಭೂಮಿಯ ಮೇಲೆ ಜನನವಾಗಿ ಬಾಳ್ವುದಕ್ಕೆ ಶ್ರೀರಮಾಪತಿಯನ್ನು ಕೊಂಡಾಡುವದೇ ಸಫಲ. ಶ್ರೀರಮಾ-ದೇವೇರಿಗೆ ಮನೆ ಎನಿಸಿಕೊಂಬಂಥ ಶ್ರೀಆದಿಕಾರಣ ಶ್ರೀನಾರಾಯಣನ ಅನಂತ ಗುಣಗಳನ್ನ ಜ್ಞಾನಿಗಳ ಮುಖಕಮಲಗಳಿಂದ ಯೋಗ್ಯತಾನುಸಾರ ತಿಳಿದು ಸ್ತೋತ್ರ ಮಾಡುವುದೇ ಬ್ರಾಹ್ಮಣಜನ್ಮ ಬಂದು ಬಾಳಿದುದಕ್ಕೆ ಫಲ. ಶ್ರೀಹರಿಸ್ಮರಣೆ ಬಿಟ್ಟು ನಿರರ್ಥಕವಾಗಿ ಆಯುಷ್ಯ ಹಿಂದುಗಳೆದರೆ ನಿಷ್ಫಲಕ್ಕೆ ಕಾರಣವಾಗುವುದು. ಇಲ್ಲಿ ಪೂರ್ವಪಕ್ಷ.

ಶ್ರೀಭಗವಂತನ ರೂಪಗಳ ಗುಣಗಳ ತಿಳಿಯೋ ವಿಷಯವಾಗಿ ರಮಾಬ್ರಹ್ಮ ರುದ್ರೇಂದ್ರಾದಿ ದೇವತೆಗಳಿಗೆ ಅಸಾಧ್ಯವೆಂದು ವೇದಶ್ರುತಿಗಳಲ್ಲಿ ಉಕ್ತವಾಗಿದೆ. ಹೀಗಿರಲು ಅಜ್ಞಾಧಿಕಾರಿಗಳಿಗೆ ತಿಳಿಯಲಿಕ್ಕೆ ಹೇಗೆ ಸಾಧ್ಯ ? ಎಂದರೆ ಸಮಾಧಾನ ಹೇಳುತಾರೆ. ಸದ್ಗತಿಯಾಗಿ ಮುಕ್ತಿ ಹೊಂದಬೇಕಾದರೆ ನಿಯತಗುರುಮುಖೇನ ದಾರದಾರ ಯೋಗ್ಯತಾನುಸಾರ ಉಪದಿಷ್ಟರಾಗಿ ಶ್ರೀಪರಮಾತ್ಮನ ನಿರ್ಮಲಗುಣಗಳ ಶ್ರವಣಮಾಡಿ ಮನನಕ್ಕೆ ತಂದು ನಿಧಿಧ್ಯಾಸನವುಳ್ಳವನಾಗಿ ಜ್ಞಾನಭಕ್ತಿಪುರಸ್ಸರವಾಗಿ ಆ ಭಗವಂತನನ್ನ ಉಪಾಸನೆ ಮಾಡುವುದೊಂದೇ ಮಾರ್ಗವಲ್ಲದೆ ಬೇರೆ ಮಾರ್ಗವಿಲ್ಲ ('ನಾನ್ಯಃ ಪಂಥಾ ಅಯನಾಯ ವಿದ್ಯತೇ' – ಮೋಕ್ಷಕ್ಕೆ ಬೇರೆ ಯಾವ ಮಾರ್ಗವೂ ಇಲ್ಲ). ಆದಕಾರಣ ಭಗವಂತನ ಅನಂತ ಕಲ್ಯಾಣಗುಣಗಳನ್ನು ಸಾಕಲ್ಯೇನ ಮುಕ್ತಾ-ಮುಕ್ತರು ಯಾರೂ ತಿಳಿಯಲು ಸಾಧ್ಯವಿಲ್ಲದೇ ಇದ್ದರೂ ಪ್ರತಿಯೊಬ್ಬನೂ ತಮ್ಮ ತಮ್ಮ ಶಕ್ತ್ಯನುಸಾರ ಭಗವಂತನ ಗುಣಗಳನ್ನ ತಿಳಿದು ಉಪಾಸನೆ ಮಾಡಲೇಬೇಕು. ಭಗವಂತನ ಮಾಹಾತ್ಮ್ಯ ತಿಳಿಯದಲೆ ಸ್ತೋತ್ರ ಮಾಡಿದರೆ ಪರಮಾತ್ಮ ಪ್ರೀತ ನಾಗೋದಿಲ್ಲ — ಅಮುಖ್ಯಫಲ ಲಭಿಸತದೆ. ಮುಖ್ಯತಾತ್ಪರ್ಯವೇನೆಂದರೆ ಗುರುಮುಖೇನ ಶ್ರೀನಾರಾಯಣನ ಗುಣಗಳನ್ನ ತಿಳಿದು ಅವನ ಸ್ಮರಣಪೂರ್ವಕ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥ ನಿಷ್ಕಾಮದಿಂದ ವಿಷಯವೈರಾಗ್ಯ ವುಳ್ಳವರಾಗಿ ಜ್ಞಾನಪೂರ್ವಕ ಶ್ರೀನಾರಾಯಣನ ಮಾಹಾತ್ಮ್ಯ ಭಕ್ತಿಯಿಂದ ಕೊಂಡಾಡಿ

ದರೆ ವೈಕುಂಠ ಪ್ರಾಪ್ತವಾಗೋದು. ಇದೇ ಮುಖ್ಯಫಲ; ಉತ್ತಮವಾದದ್ದು. ಆದಕಾರಣ ಆದಿನಾರಾಯಣನ ಮಂಗಳ ಗುಣರೂಪಗಳ ಶ್ರೀಗುರುಗಳವರ ಮುಖದಿಂದ ಯಥಾಯೋಗ್ಯತೆ ಉಪದೇಶವುಳ್ಳವರಾಗಿ ಮನನ ಮಾಡಿ ತಿಳಕೊಂಡು ಶ್ರೀಮದ್ದುರ್ವರ್ಣಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀರಮಾವಲ್ಲಭನ ರೂಪಗುಣಗಳನ್ನ ಸ್ವಯೋಗ್ಯತಾನುಸಾರ ತಿಳಿದು ಭಜಿಸುವುದೇ ಫ ಲ ವಿ ದು ಬಾಳ್ದುದಕೆ ಎಂದು ತಾತ್ಪರ್ಯ.

**ಸ್ವೋಚಿತ ಕರ್ಮಗಳಾಚರಿಸುತ ಬಹು ।**
**ನೀಚರಲ್ಲಿಗೆ ಪೋಗಿ ಯಾಚಿಸದೆ ॥**
**ಖೇಚರವಾಹ (ವಹನ) ಚರಾಚರ ಬಂಧಕ ।**
**ಮೋಚಕನಹುದೆಂದ್ಯೋಚಿಸುತಿಪ್ಪುದೆ ॥೧॥**

**ಸ್ವೋಚಿತ** — **ಸ್ವ** – ಪೂರ್ವೋಕ್ತವಾದ ಸರ್ವೋತ್ತಮನಾದ ಪರಮಾತ್ಮನ ಪ್ರಸಾದವಾಗುವುದಕ್ಕೆ **ಉಚಿತ** ವಾದ, ಅಹಂಮಮತಾ ತ್ಯಾಗಪೂರ್ವಕವಾದ, ಜ್ಞಾನ, ಭಕ್ತಿ, ವೈರಾಗ್ಯಪೂರ್ವಕವಾದ, ತಾರತಮ್ಯ ಪಂಚಭೇದದಿಂದ ಯುಕ್ತವಾದ, **ಕರ್ಮಗಳ**–ವ್ಯಾಪಾರಗಳ, **ಆಚರಿಸುತ** – ಅನುಭವರೂಪವಾದ (ಕರ್ಮಗಳ) ಅನುಷ್ಠಾನ ಮಾಡುತ, **ಬಹುನೀಚರಲ್ಲಿಗೆ** — ನೀಚರು–ನಿತ್ಯ ಸಂಸಾರಿಗಳು, ಬಲು ನೀಚರು – ತಮೋಯೋಗ್ಯರು, ಈ ಉ ಭ ಯ ರ ಲ್ಲಿ, **ಪೋಗಿ** – ಹೋಗಿ, **ಯಾಚಿಸದೆ**–(ಅವರಿಂದ) ಮಿಶ್ರಜ್ಞಾನೋಪದೇಶವೇನು, ಮಿಥ್ಯಾಜ್ಞಾನೋಪದೇಶವೇನು, ಈ ಉಭಯ ಜ್ಞಾನವನ್ನು ಅವರ ಸಹವಾಸ ಮಾಡಿ, ಇಂಥಾ ಅಸಂಭಾವಿತ ಜ್ಞಾನಾಖ್ಯದ್ರವ್ಯವನ್ನು ಅವರುಗಳ ಸಹವಾಸಮಾಡುತಾ ಯಾಚನಾ ಮಾಡಿ ಸಂಪಾದಿಸಬೇಡ. ಸ್ಥಿತಿಕಾಲದಲ್ಲೇನು, ಮೋಕ್ಷದಲ್ಲೇನು ತಾರತಮ್ಯ ಪಂಚಭೇದ ಸತ್ಯ. ಇಂಥ ಜ್ಞಾನಾಖ್ಯದ್ರವ್ಯವನ್ನು ಭಗವದ್ಭಕ್ತರಲ್ಲಿಗೆ ಹೋಗಿ, ಅವರ ಯಾಚನಾ ಮಾಡಿ ಭಗವತ್ಪ್ರೀತಿಕರವಾದ ಭೇದಜ್ಞಾನಪೂರ್ವಕ ಜ್ಞಾನ ಭಕ್ತಿ ವೈರಾಗ್ಯಗಳೆಂಬ ದ್ರವ್ಯವನ್ನು ಯಾಚನಮಾಡಿ ಸಂಪಾದಿಸಿ, **ಖೇಚರವಾಹ** — **ಖೇ**–ಆಕಾಶದಲ್ಲಿ, **ಚರ** – ಸಂಚರಿಸುವ ಪಕ್ಷಿಗಳಲ್ಲಿ ಶ್ರೇಷ್ಠನಾದ ಗರುಡದೇವರು ತನ್ನ ಭುಜದಲ್ಲಿ ವಹಿಸಿರತಕ್ಕ ಕೃಷ್ಣ, ಅಥವಾ **ಖೇ**–ಹೃದಯಾಕಾಶದಲ್ಲಿ ವಿದ್ಯಮಾನನಾದ, ಅಲ್ಲಿಯು ಅಷ್ಟದಳ ಕಮಲದಳಗಳಲ್ಲಿ, **ಚರ** – ಸಂಚಾರ ಮಾಡತಕ್ಕವ, **ವಾಹ** – ದೇಹಾಂತರ್ಗತನಾದ ಅನಿರುದ್ಧದೇಹದಿಂದ ವಿಶಿಷ್ಟನಾದ, ಜೀವನ ಯೋಗ್ಯತಾನುಸಾರ. ಐಹಿಕ ಪರದಲ್ಲಿ ಸಂರಕ್ಷಣ ಮಾಡೋ ವಿಷಯದಲ್ಲಿ ಭಾರವನ್ನು ವಹಿಸಿದ ಪರಮಾತ್ಮ. ಇಂಥವನು, **ಚರಾಚರ**–ಸ್ಥಾವರ ಜಂಗಮವೆಂಬ ಉಭಯ ವಿಧರಾದ ತ್ರಿವಿಧ ಜೀವರ, **ಬಂಧಕ**–ಸ್ವರೂಪ ಅಭಿವ್ಯಕ್ತಿ ಆಗದಂತೆ ಈಶ್ವರನಿಂದ ರಚಿತವಲ್ಲದ ಅನಾದಿ

ಯಿಂದ ಬಂಧಕರೂಪದಿಂದ ಇರತಕ್ಕ ಲಿಂಗದೇಹವನ್ನು. **ಮೋಚಕ**–ಅವರವರ **ಸಾಧನ** ಪೂರ್ತಿಮಾಡಿಸಿ ಆಯಾ ದೇಹವನ್ನು ಮೋಚನ ಮಾಡಿ ಅವರವರ ನಿಜಗತಿ ಯನ್ನು ಕೊಡತಕ್ಕವನು, **ಅಹುದೆಂದು** – ಈ ಪೂರ್ವೋಕ್ತ ಪರಮಾತ್ಮನೇ ಅಹು ದೆಂದೂ, ಅನ್ಯ ದಾರೂ ಅಲ್ಲವೆಂದೂ, **ಯೋಚಿಸುತಿಪ್ಪುದೆ** – ತಿಳಿದು ಆ ಪರಮಾತ್ಮನ ಅಸದೃಶವಾದ ಗುಣಗಳನ್ನ ಸರ್ವದಾ ಮನದಲ್ಲಿ ಕ್ಷಣೇ ಕ್ಷಣೇ ಆಲೋಚಿಸತಾ ಇರೋಣ ದಾವದದೇ ಇದೇವೇ ಬದುಕಿರುವುದಕ್ಕೆ ಫಲ.

(ಗು) ತನಗೆ, ಉಚಿತವಾದ ಕರ್ಮಗಳ ಆಚರಣೆ ಮಾಡತ–ಉಚಿತ ಕರ್ಮಗಳು ಹೇಗೆಂದರೆ ಚತುರ್ವರ್ಣಾಶ್ರಮೋಚಿತ ಕರ್ಮಗಳ ಸ್ವೋತ್ತಮರಿಂದ ಉಪದಿಷ್ಟ ರಾಗಿ ಸ್ವಸ್ವರೂಪ ಯೋಗ್ಯತೆ ತಿಳಕೊಂಡು ಯೋಗ್ಯತಾನುಸಾರ ಬಾಹ್ಯಾಭ್ಯಂತರ ಕರ್ಮಗಳ ಜ್ಞಾನಪುರಸ್ಸರ ಶ್ರೀಹರಿಗುರುಗಳ ಸ್ಮರಣಪೂರ್ವಕ ಆಚರಣೆ ಮಾಡುವದು ಯುಕ್ತವಾದದ್ದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ಪ್ರಕಾರ ಚತುರ್ವರ್ಣ ಗಳು. ಇನ್ನು ಜೀವನ ಸ್ವರೂಪವೂ ಇದೇ ರೀತಿ ನಾಲ್ಕು ಪ್ರಕಾರ. ಬ್ರಾಹ್ಮಣ-ಜೀವನಕ್ಕೆ ಇದ್ದಹಾಗೆ ಹರಿಸರ್ವೋತ್ತಮತ್ವಜ್ಞಾನ, ತಾರತಮ್ಯ ಪಂಚಭೇದ ಜ್ಞಾನ, ಶ್ರೀಹರಿಗುರುಗಳಲ್ಲಿ ಭಕ್ತಿವೈರಾಗ್ಯಾದಿಗಳು ಕ್ಷತ್ರಿಯಜೀವನಕ್ಕೆ ಇರೋದಿಲ್ಲ. ಕ್ಷತ್ರಿಯ ರಿಗೆ ಇದ್ದ ಜ್ಞಾನ ವೈಶ್ಯರಿಗೆ ಇರೋದಿಲ್ಲ. ಇವರು ನಾಲ್ಕು ಪ್ರಕಾರ ಮುಕ್ತಿ-ಯೋಗ್ಯಜೀವರು. ಸ್ವರೂಪಾನುಸಾರ, ಕಾಲಾನುಸಾರ, ವರ್ಣಾನುಸಾರ ತನ್ನ ಯೋಗ್ಯತೆಗೆ ಉಚಿತ ಕರ್ಮಗಳಾ ಚರಣೆ ಮಾಡಬೇಕು. ಹಾಗೆ ಸ್ವೋಚಿತ ಕರ್ಮ ಮಾಡಿ ಶ್ರೀಹರಿಗುರುಗಳಿಗೆ ಸಮರ್ಪಣೆ ಮಾಡಬೇಕು. ಇದರಿಂದ ಶ್ರೀಹರಿವಾಯು ಗಳು ಪ್ರೀತರಾಗುತ್ತಾರೆ. ಅಜ್ಞಾನದಿಂದ ಮಾಡಿದ ಕರ್ಮ, ಹರಿಸಮರ್ಪಣೆ ಮಾಡದ ಕರ್ಮ, ಎರಡೂ ಸಾರ್ಥಕವಾಗೋದಿಲ್ಲ.

ಇನ್ನು ಆಶ್ರಮೋಚಿತ ಕರ್ಮಗಳೂ ನಾಲ್ಕು ಪ್ರಕಾರ—ಯತಿಗಳ ಕರ್ಮ ವಾನಪ್ರಸ್ಥರಿಗೆ ಕೂಡದು. ಅವರ ಧರ್ಮ ಗೃಹಸ್ಥರಿಗೂ, ಗೃಹಸ್ಥರದು ಬ್ರಹ್ಮ-ಚಾರಿಗಳಿಗೂ ಕೂಡದು. ಆಶ್ರಮಕ್ಕೆ ಉಚಿತವಾಗಿ ಕ್ರಮಪೂರ್ವಕ ಮಾಡೋಣ ಉಚಿತ ಕರ್ಮವಾಗತದೆ, ವಿಪರೀತ ಮಾಡಿದರೆ ಅನುಚಿತವಾಗತದೆ.

ಬಹು ನೀಚರೆಂದರೆ ತಮೋಧಿಕಾರಿಗಳು, ಅದ್ವೈತಜ್ಞಾನವುಳ್ಳ ದೈತ್ಯರು. ಕಾರಣ, ಇಂಥಾವರಲ್ಲಿ ಯಾಚನೆ ಮಾಡಬಾರದು. ತನಗಿಂತ ನೀಚರಾದ ಅಧಿಕಾರಿ-ಗಳಲ್ಲಿ ತತ್ವವಿಚಾರ ಯಾಚನಾ ಮಾಡಿದರೆ ಶ್ರೀನಾರಾಯಣವಿಷಯಕ ಜ್ಞಾನ ಕೊಡೋಣವೇ ಇಲ್ಲ ಆದಕಾರಣ ನೀಚರಲ್ಲಿ ಯಾಚನಾ ಮಾಡಕೂಡದು, ಉಚಿತ ಕರ್ಮವೆನಿಸುವುದಿಲ್ಲ, ಅನುಚಿತವಾಗತದೆ; ದುಃಖಪ್ರಾಪ್ತಿಯಾಗುವುದು.

**ಚರಾಚರ ಬಂಧಕ**—ಚರ–ಭೂಚರ, ಜಲಚರ, ಖೇಚರ ತ್ರಿವಿಧ ಸ್ಥಳದಲ್ಲಿ ಸಂಚಾರ ಮಾಡುವಂಥಾ ಜೀವರುಗಳಿಗೆ ಲಿಂಗದೇಹಾದಿ ಮೊದಲು ಮಾಡಿ ಅಹಂಕಾರ ಮಮಕಾರ ಅರಿಷಡ್ವರ್ಗಗಳೆಂಬೋ ಪಾಶದಿಂದ ಭವಾಖ್ಯವಾದ ಸಂಸಾರದಲ್ಲಿ ಬಂಧನ ಮಾಡಲಿಕ್ಕೆ ಕಾರಣ ಶ್ರೀಹರಿ ಕರ್ತ. **ಅಚರ**–ಸ್ಥಾವರ ಜೀವರಿಗೆ ಬಂಧಕ ಕರ್ತ ಶ್ರೀನಾರಾಯಣ. **ಮೋಚಕ** – ಸಮಸ್ತ ದೇವತೆಗಳಿಗೆ ಮೊದಲಾಗಿ ಸ್ಥಾವರ ಜೀವರವರೆಗೆ ಸಂಸಾರವೆಂಬೋ ಪಾಶಬಂಧನ ವಿಮೋಚನೆ ಮಾಡಿ ಆನಂದ ಕೊಡು-ವಂಥವ ಶ್ರೀರಮಾಕಾಂತನೆಂದು. **ಯೋಚಿಸುತಿಪ್ಪುದೇ**–ಸರ್ವದಾ ಆ ಶ್ರೀನಾರಾ-ಯಣನ್ನ ಭಕ್ತಿಪುರಸ್ಸರ ಸ್ಮರಣೆಪೂರ್ವಕ ಚಿಂತನಮಾಡತ ಇರುವದೆ ಬಾಳ್ದುದಕೆ ಫಲ.

**ಕಠಿಣಶಬ್ದಾರ್ಥ** — ಸ್ವ–ತನಗೆ, ಉಚಿತ–ಯೋಗ್ಯವಾದ, ಅರ್ಹವಾದ- ಸ್ವೋಚಿತ. ಖೇಚರ-ವಾಹ — ಖೇ–ಆಕಾಶದಲ್ಲಿ, ಚರ–ಸಂಚರಿಸುವ ಪಕ್ಷಿಯೇ ಖೇಚರ. ಅವುಗಳಲ್ಲಿ ಶ್ರೇಷ್ಠನಾದ ಗರುಡನೇ. ವಾಹ–ವಾಹನವಾಗಿರುವ (ಗರುಡ ವಾಹನನಾದ ವಿಷ್ಣು).

**ಭೀ.** (೧) – "ವಿಹಿತತ್ವಾಚ್ಚಾಶ್ರಮಕರ್ಮಾಪಿ" ಎಂದು ಬ್ರಹ್ಮಸೂತ್ರದಲ್ಲಿ (೩ ಅ, ೪ ಪಾ. ೩೨ ಸೂ.) ತನ್ನ ತನ್ನ ವರ್ಣ ಮತ್ತು ಆಶ್ರಮಕ್ಕೆ ಯೋಗ್ಯವಾದ ಕರ್ಮಗಳನ್ನೇ ಸಕಲರೂ ಆಚರಿಸಬೇಕೆಂದು ವಿಧಿಸಿರುವುದರಿಂದಲೂ ತದ್ವಿರುದ್ಧವಾದ ವರ್ತನೆಗಳೆಲ್ಲವೂ ಅಧರ್ಮವೇ ಆಗುತ್ತದೆಯಾದ್ದರಿಂದಲೂ ತನ್ನ ತನ್ನ ವರ್ಣಾ-ಶ್ರಮಗಳಿಗೆ ವಿಹಿತವಾದ ಕರ್ಮಗಳನ್ನೇ ಮಾಡಬೇಕು. (೨) "ನೀಚರಲ್ಲಿ ಯಾಚಿಸದೆ" ಎಂಬಲ್ಲಿ ದುರ್ಜನರು ಮಾತ್ರವಲ್ಲದೆ ಸರ್ವಾಭೀಷ್ಟಪ್ರದನಾದ ಶ್ರೀಹರಿ-ಯನ್ನು ಬಿಟ್ಟು ಕೇವಲ ಲಕ್ಷ್ಮೀ, ಬ್ರಹ್ಮರುದ್ರಾದಿ ದೇವತೆಗಳನ್ನು ಯಾಚಿಸುವುದೂ ಅನುಚಿತವೇ. ಏಕೆಂದರೆ ಅಕ್ರೂರನು (ಭಾಗವತದಲ್ಲಿ) ಹೇಳಿದಂತೆ 'ಕಃ ಪಂಡಿತಸ್ತ್ವದ-ಪರಂ ಸಮೀಯಾತ್' ಎಂದರೆ 'ನಿನ್ನನ್ನು ( ಶ್ರೀಕೃಷ್ಣನನ್ನು ) ಬಿಟ್ಟು ಬೇರೆಯವ ರನ್ನು ಆಶ್ರಯಿಸುವವನು ದುಷ್ಟಪಂಡಿತನೇ ಆಗುತ್ತಾನೆ.' (೩) ವಿಷ್ಣುತತ್ವ ನಿರ್ಣಯದಲ್ಲಿ ಉದಹರಿಸಿದ 'ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ' ಎಂಬ ಪ್ರಮಾಣದಂತೆ ಜೀವರನ್ನು ಸಂಸಾರದಿಂದ ಬಂಧಿಸುವವನೂ ಆ ಬಂಧನ ಬಿಡಿಸುವವನೂ ಶ್ರೀಹರಿಯೇ ಹೊರತು ಬೇರೆ ಯಾರೂ ಅಲ್ಲ.

**ನಿಚ್ಚ ಸುಭಕುತಿಯೊಳ (ಯೆಲ) ಚ್ಯುತನಂಘ್ರಿಗ ।**
**ಅರ್ಚಿಸಿ ಮೆಚ್ಚಿಸುತೆ(ತ್ಯೈ)ಚ್ಚರದಿ ॥**
**ತುಚ್ಛ ವಿಷಯಂಗಳ ಇಚ್ಛೈಸದೆ ಯಂ ।**
**ದೃಚ್ಛಾ (ದ್ರಿಚ್ಛ) ಲಾಭದಿಂ ಪ್ರೋಚ್ಚನಾಗುವುದೆ (ವದೆ) ॥೨॥**

**ನಿಚ್ಚ ಸುಭಕುತಿಯೊಳು** — ಪರಮಾತ್ಮನ ಗುಣಗಳನ್ನ ಆಲೋಚನೆ ಮಾಡುವ ಕಾಲದಲ್ಲಿ ಭಕ್ತಿಸಹಿತನಾಗಿರಬೇಕು. ಭಕ್ತಿ ಎಂದರೆ ಸ್ನೇಹ, ಆ ಸ್ನೇಹ ಹೇಗಿರಬೇಕೆಂದರೆ, **ನಿಚ್ಚ** – ನಿ ಶ್ಚ ಯ ವಾ ಗಿ, ಚಂಚಲರಹಿತವಾಗಿರಬೇಕು, **ಸುಭಕುತಿ**–ಸಮೀಚೀನ ಭಕ್ತಿ ಎಂದರ್ಥ, ಅಂದರೆ ತಾರತಮ್ಯಾನುಸಾರ ಕರ್ಮಾಭಿ ಮಾನಿ (ಕರ್ಮಜ) ಪುಷ್ಕರನಲ್ಲಿ ಮಾಡತಕ್ಕ ಭಕ್ತಿಗಿಂತಲೂ, ಅವರರಕಿಂತಲೂ ಉತ್ತಮರಾದ ದೇವತೆಯಲ್ಲಿ ಅದಕ್ಕಿಂತಲೂ ಅತಿಶಯ ಭಕ್ತಿ ಇರಬೇಕು. ಈ ಪ್ರಕಾರ ತಾರತಮ್ಯಾನುಸಾರ ವಾಯುದೇವರಲ್ಲಿ ಅತಿಶಯಭಕ್ತಿ ಮಾಡಬೇಕು. ತದಪೇಕ್ಷಯಾ ರಮಾದೇವೇರಲ್ಲಿ, ತದಪೇಕ್ಷಯಾ ಪರಮಾತ್ಮನಲ್ಲಿ ಪೂರ್ಣಭಕ್ತಿ— ಸ್ವಯೋಗ್ಯತಾನುಸಾರ ಮಾಡಬೇಕು. ಅದರ ( ಭಗವಂತನ ) ಹೋಲಿ ಭಕುತಿ ಮಾಡತಕ್ಕ ವಸ್ತುವೇ ಇಲ್ಲ. ಏತಾದೃಶವಾದ ಭಕ್ತಿ ದಾವದದೆ ಇದೇ ಸುಭಕ್ತಿ; ಭಕ್ತ್ಯಾಖ್ಯ ಸ್ನೇಹಲಕ್ಷಣ ಎಂಥಾದ್ದೆಂದರೆ ಕಾಮಾಂಧಕಾರನಾದ ಪುರುಷ ದಿವ್ಯ ವರ್ಚಸ್ವಿಯಾದ ಸ್ತ್ರೀಯರನ್ನು ನೋಡಿ, ಆ ಸ್ತ್ರೀಯಾದವಳು ತನ್ನ ಭೋಗಕ್ಕೆ ಒದಗುವವರೆಗೂ ಲೋಕವ್ಯಾಪಾರ ಬಿಟ್ಟು ಸರ್ವದಾ ಅವಳಲ್ಲೇ ಚಿತ್ತವಿಟ್ಟು ಆ ಚಿತ್ತ ಹಿಂದಕ್ಕೆ ತಿರುಗದೇ ಅಲ್ಲೇ ಲಗ್ನವಾಗಿ ಅರೆಲವಕಾಲವಾದರೂ ಬಿಡದೆ ಇರೋಣ ದಾವದದೆ ಇದೇ ಭಕ್ತ್ಯಾಖ್ಯ ಸ್ನೇಹಕ್ಕೆ ದೃಷ್ಟಾಂತ. ಇಂಥಾ ಭಕ್ತಿ ಪರಮಾತ್ಮನಲ್ಲಿರ-ಬೇಕೆಂಬುದೇ ತಾತ್ಪರ್ಯ. ಈ ಪ್ರಕಾರದ ಸಮೀಚೀನ ಭಕ್ತಿಯುಕ್ತನಾಗಿ ಏನು ಮಾಡಬೇಕೆಂದರೆ, **ಅಚ್ಯುತನಂಘ್ರಿಗಳ** — ಅಚ್ಯುತನ–ನಾಶರಹಿತ, ಬ್ರಹ್ಮಾದಿ ತೃಣಾಂತ ಜೀವರು ದೇಹದಿಂದ ನಾಶ ಇರತಕ್ಕವರು, ಪರಮಾತ್ಮಗೆ ಅಂಥ ನಾಶ-ವಿಲ್ಲದ್ದರಿಂದ ಅಚ್ಯುತನು. ಇಲ್ಲಿ ರಮಾದೇವೇರಿಗೂ ಇಂಥಾ ನಾಶವಿಲ್ಲದ್ದರಿಂದ ಪರಮಾತ್ಮನಿಗೂ ರಮಾದೇವೇರಿಗೂ ಸಾಮ್ಯ ಬಂತಲ್ಲಾ ಎಂಬ ಆಕ್ಷೇಪಕ್ಕೆ ರಮಾ-ದೇವೇರ ನಾಶರಹಿತತ್ವವು ಈಶಾಧೀನ. ಈಶನ ನಾಶರಹಿತತ್ವವು ಅನ್ಯರ ಅಧೀನ-ವಾದದ್ದಲ್ಲ, ಆದ್ದರಿಂದ ಪೂರ್ವಪಕ್ಷ ನಿರಾಸವಾಯಿತು. ಇಂಥಾ ಅಚ್ಯುತನಾದ ಹೃದಯಾಕಾಶಗತ ಪರಮಾತ್ಮ, **ನ(ಅ)ಂಘ್ರಿಗಳ**–ಪಾದಗಳ, **ಅರ್ಚಿಸಿ**–ಅಧಿಕಾರಿ-ಯಾದವ ತನ್ನ ಏಕಾದಶೇಂದ್ರಿಯಗಳನ್ನು ಅನ್ಯವಿಷಯಗಳಲ್ಲಿ ಬಿಡದೇ ಅವನ ಪಾದ-ದ್ವಯಗಳಲ್ಲಿ ಸದಾ ಲಗ್ನವಾಗಿರುವುದೇ ಅರ್ಚಿಸೋಣ. ಇಂಥಾ ಅರ್ಚನೆಯನ್ನು ಮಾಡುವವನಾಗಿ, **ಮೆಚ್ಚಿಸುತ**–`ಈ ಅಧಿಕಾರಿ ಅನ್ಯವಿಷಯಂಗಳಲ್ಲಿ ಸಕ್ತನಾಗದೇ ನನ್ನನ್ನೇ ನಂಬಿದವ' ಎಂತ ಪರಮಾತ್ಮ ಮೆಚ್ಚುವಂತೆ ಮಾಡು ಎಂತ ತಾತ್ಪರ್ಯ. ಇದರಿಂದಲೇ ಪರಮಾತ್ಮ ಮೆಚ್ಚತಾನೇ ಹೊರತು ತದನ್ಯ ಕಾರಣಗಳಿಂದ ಮೆಚ್ಚು-ವದಿಲ್ಲವೆಂದು ಅರ್ಥ. ಈ ಪ್ರಕಾರ ಅರ್ಚಿಸುತ ಮೆಚ್ಚಿಸತ, **ಎಚ್ಚರದಿ**–ಬಹು ಎಚ್ಚರಿಕೆಯಿಂದ ಇರೋಣ, ಎಚ್ಚರನಾಗಿರಬೇಕೆಂದರೆ **ತುಚ್ಛ ವಿಷಯಂಗಳಲ್ಲಿ**–ಇಚ್ಛಿಸದೇ, ತುಚ್ಛ – ಅಶಾಶ್ವತವಾದ ವಿಷಯಗಳೆಂದರೆ ಐಹಿಕಭೋಗ ವಿಷಯ-

ಗಳನ್ನಿಚ್ಛೈಸೆ–ಇಚ್ಛಾಪಂತೆ ಪ್ರಾಪ್ತವಾಗದ್ದರಿಂದ ಕ್ಲೇಶಾದಿಗಳು ಬರೋಣ, ಇಂಥಾ ಕ್ಲೇಶಾದಿಗಳ ಕೊಟ್ಟು ಐಹಿಕದಲ್ಲಿ ಸುಖ ಕೊಡದೇ ಪರಮಾತ್ಮನ ಅನುಗ್ರಹವನ್ನ ದೂರಮಾಡಿ ಪಾರತ್ರಿಕದಲ್ಲಿ ನರಕಾದಿ ದುಃಖ ಕೊಡತಕ್ಕ ಇಂಥ ಐಹಿಕಸಂಬಂಧ ತುಚ್ಛವಿಷಯಗಳ, **ಇಚ್ಛೈಸದೆ** – ಇಚ್ಛಾ ಮಾಡದೇ, **ಯದೃಚ್ಛಾ ಲಾಭದಿಂ**– ಪೂರ್ವಕರ್ಮವನ್ನನುಸರಿಸಿ ಪರಮಾತ್ಮನ ಇಚ್ಛೆಯಿಂದ ದಾವ ಕಾಲದಲ್ಲಿ ಎಂಥಾದ್ದು ಪ್ರಾಪ್ತವಾಗತದೋ ಅದನ್ನ ಪೂರ್ವಕರ್ಮಾನುಸಾರ ಪರಮಾತ್ಮನ ಇಚ್ಛಾದಿಂದ ಕೊಡಲ್ಪಟ್ಟಿದ್ದೆಂದು ತಿಳಿದವನಾಗಿ ಪೂರ್ವೋಕ್ತ ಪ್ರಕಾರ ಪರಮಾತ್ಮನಲ್ಲಿ ಭಕ್ತಿಮಾಡಿ ಅದು ಕೆಡದೇ, **ಪ್ರೋಚ್ಚನಾಗುವುದೇ** – ಸಂತೋಷದಿಂದಿರುವದೇ, ಬದುಕ್ಕಿದ್ದಕ್ಕೆ ಫಲ ಎಂತ ತಾತ್ಪರ್ಯ. ಕರ್ಮಾನುಸಾರ ಫಲ ಪ್ರಾಪ್ತವಾದ ಕಾಲದಲ್ಲಿ ಅಧಿಕ ಅಪೇಕ್ಷಿಸಿದರೂ ಬರೋದಿಲ್ಲ. ಪ್ರಾಪ್ತವಾದದ್ದು ನ್ಯೂನವಾಗಬೇಕೆಂದರೂ ಆಗೋ-ದಿಲ್ಲ. ಅನುಭವಿಸಿಯೋ ತೀರಬೇಕು. ಅದರಲ್ಲಿ ಈ ಅನುಸಂಧಾನವಿದ್ದ ಅಧಿಕಾರಿಯೋ ಭಗವದನುಗ್ರಹಕ್ಕೆ ಪಾತ್ರನಾಗತಾನೆ, ತದನ್ಯರಾಗೋದಿಲ್ಲವೆಂದರ್ಥ.

(ಗು.) ನಿಚ್ಚ – ನಿತ್ಯದಲ್ಲಿ, ಸುಭಕ್ತಿಯಲಿ ಸಮೀಚೀನವಾದ ನವವಿಧ ಭಕ್ತಿ-ಪುರಸ್ಸರದಿಂದ, ನವವಿಧಭಕ್ತಿಗೆ ಪ್ರಮಾಣ-ಶ್ರವಣಂ, ಕೀರ್ತನಂ, ವಿಷ್ಣೋಃ ಸ್ಮರಣಂ, ಪಾದ ಸೇವನಮ್ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ ನವವಿಧ ದ್ವೇಷರಹಿತವಾದ ಈ ಪ್ರಕಾರ ನವವಿಧ ಭಕ್ತಿಯಿಂದ ಅರ್ಚನ ಮಾಡಿ ಮೆಚ್ಚಿಸಿ, ಯೆಚ್ಚರದಿ–ಪರದಾರಾದಿಗಳಲ್ಲಿ ಪರಧನ ಪರನಿಂದಾ ಇವುಗಳ ಅಜ್ಞಾನ-ವೆಂಬೋ ಮದದಿಂದ ಮೋಹಕ್ಕೊಳಗಾಗವೆ, ಎಚ್ಚರದಿ – ಜ್ಞಾನವೆಂಬೋ ಎಚ್ಚರ-ದಿಂದ (ಅಜ್ಞಾನವೇ ಶ್ರೀನಾರಾಯಣನ ವಿಸ್ಮರಣೆಗೆ ನಿದ್ರಾರೂಪ, ಶ್ರೀಪರಮಾತ್ಮನ ಕೊಂಡಾಡುವ ವಿಷಯಜ್ಞಾನವೆಂಬುದೇ ಎಚ್ಚರ—ಇದರಿಂದ–ಹಾಗೂ ಎಚ್ಚರದಿ–ದೇಹ ಅನಿತ್ಯ. ಅಶಾಶ್ವತವಾದದ್ದು ಎಂದು ತಿಳಿಯದೆ ಮೈಮರೆದು) ಪುತ್ರ ದಾರಾದಿಗಳಲ್ಲಿ ಲೋಲುಪನಾಗಿರದೆ ಪರಮಾತ್ಮನ ಪಾದಸ್ಮರಣೆಯಿಂದ ಎಚ್ಚರಿಕೆ ಉಳ್ಳವನಾಗಿರು. ಪ್ರೋಚ್ಚನಾಗುವದೇ – ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗಿ ಯೋಗ್ಯನಾಗುವದೇ ಫಲವಿದು ಬಾಳ್ದುದಕೆ.

ನಿಚ್ಚ – 1. ( ತದ್ಭವರೂಪ ) ನಿತ್ಯ, ಪ್ರತಿದಿನ. 2. ನಿರಂತರವಾಗಿ. 3. (ನಿಚ್ಚಳ) ನಿಷ್ಕಪಟವಾದ, ಪರಿಶುದ್ಧವಾದ. 4. ಸ್ಥಿರವಾದ (ನಿಶ್ಚಲವಾದ), ಅಂಘ್ರಿ–ಪಾದ, ಕಾಲು. 5. ಯದೃಚ್ಛಾಲಾಭದಿ – ದೈವೇಚ್ಛೆಯಿಂದ ಯಾವುದು ಲಭಿಸುವುದೋ, 6. ಅಷ್ಟರಿಂದಲೇ ಪ್ರೋಚ್ಚ (ಪ್ರ + ಉಚ್ಚ) ಸಂತುಷ್ಟ, ಸಂತೃಪ್ತ.

(ಭೀ.) ೧. ನಿಚ್ಚ ಸುಭಕುತಿ – ನಿರ್ವ್ಯಾಜವಾದ ಮಾಹಾತ್ಮ್ಯಜ್ಞಾನ ಪೂರ್ವಕವಾದ ಹರಿಸರ್ವೋತ್ತಮನೆಂಬ ಜ್ಞಾನಜನ್ಯಪ್ರೇಮ. ೨. 'ಸಂಚಿಂತಯೇದ್

ಭಗವತಶ್ಚರಣಾರವಿಂದಂ' ಎಂದು ಭಾಗವತಾಧಿ ಗ್ರಂಥಗಳಲ್ಲಿ ಪಾದಗಳ ಧ್ಯಾನಕ್ಕೇ ವೈಶಿಷ್ಟ್ಯವಿರುವುದರಿಂದ 'ಅಚ್ಯುತನ ಅಂಘ್ರಿಗಳ ಅರ್ಚಿಸಿ' ಎಂದು ಹೇಳಿದ್ದಾರೆ. ೩. 'ಸಂತುಷ್ಟೋ ಯೇನ ಕೇನಚಿತ್' ಎಂಬುದು ಭಾಗವತಧರ್ಮಗಳಲ್ಲಿ ಪ್ರಧಾನವಾದುದು. ಅಲಭ್ಯ ವಸ್ತುಗಳಿಗಾಗಿ ಪ್ರಯತ್ನ ಮಾಡಿದಷ್ಟೂ ದುಃಖಕ್ಕೆ ಕಾರಣ. ಆದಕಾರಣ ಅಯಾಚಿತವಾಗಿ ದೊರಕುವುದರಿಂದಲೇ ತೃಪ್ತನಾಗುವುದು ಉತ್ತಮ ಪಕ್ಷವೆಂದು ಭಾವ.

ಕರ್ಮಗಳನ್ನನುಸರಿಸಿ ಶುಭಾಶುಭಗಳನ್ನು ಕೊಡತಾನೆಂದರೆ :

**ವಾಸವಮುಖ ವಿಬುಧಾಸುರ ನಿಚಯಕೆ ।**
**ವಾಸುದೇವನೆ ಶುಭಾಶುಭದ ॥**
**ಈ ಸಮಸ್ತ ಜಗಕೀಶ ಕೇಶವಾ ।**
**ನೀಶ ಜೀವರೆಂಬೀ ಸುಜ್ಞಾನವೆ—ಫಲವಿದು ॥೩॥**

(ನುಡಿಯ ಸಂಖ್ಯೆಯ ಕ್ರಮ ವ್ಯತ್ಯಾಸವಾಗಿದೆ, ಇತರ ಪಾಠಗಳಲ್ಲಿ ಇದು ನಾಲ್ಕನೆಯದಾಗಿದೆ.)

**ವಾಸವ** – ಇಂದ್ರದೇವರೇ, **ಮುಖ** – ಮುಖ್ಯರಾದ (ಮೊದಲಾದ), **ವಿಬುಧ** – ಜ್ಞಾನಿಗಳು, ಇಂದ್ರದೇವರಿಂದ ತೃಣಾಂತದವರೆಗೂ ಭಗವತ್ಪಾದಾರವಿಂದವೈದತಕ್ಕ ಮುಕ್ತಿಯೋಗ್ಯರು, **ಅಸುರನಿಚಯಕೆ** – ಕಲ್ಯಾದಿ ದೈತ್ಯರ ಸಮೂಹಕ್ಕೆ, ದೈತ್ಯರಲ್ಲಿ ನಿತ್ಯಸಂಸಾರಿಗಳು ಅಂತರ್ಭೂತರೆಂದು ಗ್ರಾಹ್ಯ, ಪರಮಾತ್ಮನಲ್ಲಿ ತಾರತಮ್ಯಾನುಸಾರ ದ್ವೇಷಸ್ವಭಾವವುಳ್ಳವರು. ತತ್ಸದೃಶರಾದ ಉಭಯ ಸಮೂಹದವರಿಗೆ ಲಿಂಗಭಂಗದ ನಂತರ ಶುಭಾಶುಭ ಫಲ ಕೊಡತಕ್ಕವ ದಾರೆಂದರೆ, **ವಾಸುದೇವನೆ**–ಮುಕ್ತಿಯೋಗ್ಯರಿಗೆ ವಾಸುದೇವರೂಪದಿಂದ **ಶುಭ**ರೂಪವಾದ ಸುಖರೂಪವಾದ ವೈಕುಂಠಲೋಕವನ್ನು, **ದ**–ಕೊಡತಕ್ಕವ, ವಾಸುದೇವ ಎಂತ ಪ್ರಯೋಗವಿರುವುದರಿಂದ ಅನ್ಯರೂಪದಿಂದ ಆ ಕಾರ್ಯ ಮಾಡೋದಿಲ್ಲ. ವಾಸುದೇವರೂಪದಿಂದಲೇ ಎಂತ ತಾತ್ಪರ್ಯ. ತಮೋಯೋಗ್ಯರಿಗೆ, **ಅಶುಭದ**–ಅಮಂಗಳವಾದ, ನಿತ್ಯದುಃಖವಾದ ಅಂಧಂತಮೋಲೋಕವನ್ನು ಲಿಂಗಭಂಗಾನಂತರ ಸಂಕರ್ಷಣರೂಪದಿಂದ ಕೊಡುವನೆಂದು ತಾತ್ಪರ್ಯ. ಮುಕ್ತಿಯೋಗ್ಯರಿಗೆ ವಾಸುದೇವ ರೂಪದಿಂದೆಂದ ಮೇಲೆ, ತಮೋಯೋಗ್ಯರಿಗೆ ಸಂಕರ್ಷಣನೆಂಬುದು ಅರ್ಥಾತ್ ಸಿದ್ಧವು, ಬ್ರಹ್ಮರುದ್ರಾದಿಗಳ ಪ್ರಸಕ್ತವಿಲ್ಲ. ಅವರಿಗೆ ವಾಸುದೇವ ಶುಭಪ್ರದನಲ್ಲವೆ ಅಂದರೆ, ಇಲ್ಲಿ ವಾಸುದೇವ ಶಬ್ದವನ್ನು ಆವರ್ತನಮಾಡಿಕೊಳ್ಳಬೇಕು. ವಾಸುದೇವನಿಂದ ಮಹತ್‌ತತ್ವಸಹಿತನಾದ ಬ್ರಹ್ಮನ ಸೃಷ್ಟಿಯಾದ್ದರಿಂದ ವಾಸುದೇವಸಾಂಕೇತದಿಂದ

ಬ್ರಹ್ಮನೂ ಗ್ರಾಹ್ಯವು. ಹಾಗೆ ಮೋಕ್ಷಪ್ರದನಾದ ಶ್ವೇತದ್ವೀಪಗತನಾದ ವಾಸುದೇವನೂ ಗ್ರಾಹ್ಯವೇ. ಇಲ್ಲಿಗೆ ಬ್ರಹ್ಮದೇವರು ಬಂದಂತಾಯಿತು. ರುದ್ರದೇವರು ದಾವದರಿಂದ ಗ್ರಾಹ್ಯರೆಂದರೆ ಇಂದ್ರಾದಿಗಳಿಗೆ ಉತ್ತಮರು, ಇಂದ್ರಾದಿಗಳು ರುದ್ರದೇವರಿಂದ ಸೃಜ್ಯರಾದವರು. ಆದ್ದರಿಂದ ಇಂದ್ರಾದಿಗಳನ್ನು ಹೇಳಿದ್ದರಿಂದ ರುದ್ರದೇವರೂ ಗ್ರಾಹ್ಯ, ಮತ್ತು ಬ್ರಹ್ಮದೇವರಿಂದ ರುದ್ರದೇವರ ಸೃಷ್ಟಿ. ಹಾಗೆಯೇ ಆ ರುದ್ರದೇವರ ದ್ವಾರಾ ರುದ್ರಾದಿಗಳ ಸಹಿತರಾದ ಇಂದ್ರಾದಿಗಳು ಎಂತಲೇ ಅಭಿಪ್ರಾಯವು. ಆದ್ದರಿಂದ ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಿಗೆ ವಾಸುದೇವನೇ 'ಶುಭದ' ಎಂತ ತಾತ್ಪರ್ಯವಾದ್ದರಿಂದ ಪೂರ್ವಪಕ್ಷಕ್ಕೆ ಸಮಾಧಾನ. ರಮಾದೇವೇರಿಗೆ ಪರಮಾತ್ಮ ಶುಭಪ್ರದನಲ್ಲವೇ ಎಂದರೆ, ಯಾಕೆಂದರೆ ಇಲ್ಲಿ ರಮಾದೇವೇರ ಪ್ರಸಕ್ತಿಯೇ ಇಲ್ಲವೆಂದು ಆಕ್ಷೇಪ ಮಾಡಿದರೆ, **ಈ ಸಮಸ್ತ**—ವರ್ತಮಾನ ಬ್ರಹ್ಮಾಂಡಗತ ಸಮಸ್ತವಾದ, **ಜಗಕೆ**-ತ್ರಿವಿಧ ಜೀವಸಮೂಹಕ್ಕೆ, **ಈಶ**-ನಿಯಾಮಕಳಾದವಳು ರಮಾ ಎಂದು ಅರ್ಥ. ರಮಾದೇವೇರಿಗೆ ಈಶನಾದವ ಕೇಶವ. ಇದರಿಂದ ರಮಾದೇವೇರೂ ಗ್ರಾಹ್ಯವೆಂದರ್ಥ. ಮತ್ತು **ಕೇಶವ** ಶಬ್ದದಿಂದ ಅವ್ಯಕ್ತತತ್ವ, ತದಭಿಮಾನಿ ರಮಾದೇವೇರು ಅಂತಲೂ ಅರ್ಥ. ಅವ್ಯಕ್ತತತ್ವಕ್ಕೆ ನಿಯಾಮಕ ಕೇಶವರೂಪೀ ಪರಮಾತ್ಮ ಎಂತ ಶಾಸ್ತ್ರದಿಂದ ಸಿದ್ಧವು. ಅವ್ಯಕ್ತತತ್ವವು ಲಕ್ಷ್ಮೀತತ್ವವು. ಇದರಿಂದ (ಅತ ಏವ) ಲಕ್ಷ್ಮೀದೇವೇರೂ ಬಂದಂತಾಯಿತು. ಲಕ್ಷ್ಮೀ ಆರಂಭಮಾಡಿ ತೃಣಾಂತದವರೆಗೂ ಶುಭಪ್ರದನಾದವನು ವಾಸುದೇವನೆಂದು ತಾತ್ಪರ್ಯ. ಆದ್ದರಿಂದ ರಮಾವಿಷಯಕ ಆಕ್ಷೇಪಕ್ಕೆ ಸಮಾಧಾನ ಬಂದಂತಾಯಿತು. ಇನ್ನೊಂದು ಆಕ್ಷೇಪ—ತತ್ವನ್ಯಾಸದಲ್ಲಿ ಬ್ರಹ್ಮಾಣೀಭಾರತಿಯರು ಎಂದು ಹೇಳತಕ್ಕ ಅವ್ಯಕ್ತತತ್ವವಿದೆಯಲ್ಲ ಎಂದರೆ, ಅಲ್ಲಿ ಅವ್ಯಕ್ತತತ್ವ ಮಹತ್‌ತತ್ವದೊಳಗೆ ವಿಭಾಗವಾದದ್ದು ಎಂದು 'ಕಾರ್ಯ'ದಲ್ಲಿ 'ಕಾರಣ' ಒಳಗೊಂಡದ್ದು ಎಂಬ ವಿವಕ್ಷೆ ಗ್ರಂಥಾಂತರದಲ್ಲಿ ವಿದಿತವಾಗಿದೆ. ರಮಾಭಿಮನ್ಯವಾದ ಅವ್ಯಕ್ತತತ್ವಕ್ಕೆ ಕೇಶವ. ಅವ್ಯಕ್ತದಿಂದ ಸೃಷ್ಟವಾದದ್ದು ಮಹತ್‌ತತ್ವ. ಇದರಲ್ಲಿ ವಿಭಾಗವಾದದ್ದು ಅವ್ಯಕ್ತ ತತ್ವ. ಈ ಎರಡಕ್ಕೂ ನಾರಾಯಣ. ಈ ಪ್ರಕಾರ ಅವ್ಯಕ್ತತತ್ವಗಳು ಎರಡು. ಆದ್ದರಿಂದ ಅವ್ಯಕ್ತತತ್ವವಿಷಯಕವಾದ ಆಕ್ಷೇಪಕ್ಕೆ ಹೀಗೆ ಸಮಾಧಾನ ತಿಳಿಯಬೇಕು. ಇನ್ನು ರಮಾದೇವೇರಿಗೆ ಕೊಡತಕ್ಕ ಶುಭ ದಾವದೆಂದರೆ, ನಿತ್ಯನೂತನ ನೂತನವಾದ ತನ್ನ ವಿಭವ ತೋರಿಸಿ ಆನಂದಮಗ್ನಳನ್ನಾಗಿ ಮಾಡೋಣವೇ ರಮಾದೇವೇರಿಗೆ ಲಭಿಸುವ ಶುಭ ಎಂದು ಸಮಾಧಾನವು. ಹಾಗಾದರೆ ಪರಮಾತ್ಮನಿಗೆ ಶುಭ ದಾವುದೆಂದರೆ ರಮಾದೇವೇರನ್ನು ಅತ್ಯಾಶ್ಚರ್ಯಗೊಳಿಸತಕ್ಕ 'ಸ್ವರಮಣ' ವೆಂಬುದೇ ಅವನ ಶುಭವು. ಅಲ್ಲದೇ ಪರಮಾತ್ಮನಾದರೋ ರಮಾಬ್ರಹ್ಮಾದಿ ತೃಣಾಂತ ತ್ರಿವಿಧ ಜೀವರಿಗೆ ಈಶನಾದವನು. ಅವನು ಬೇರೆ ಈಶರಿಂದ ರಹಿತನೆಂಬುದು

**ಅನೀಶ ಜೀವರೆಂಭೋ** ವಾಕ್ಯದಿಂದ ಸರ್ವೇಶ ಪರಮಾತ್ಮನೆಂತಲೂ ಸಿದ್ಧ-ವಾಯಿತು. ಅವಗೆ ಅನ್ಯ ಈಶನಿಲ್ಲ. ರಮಾದೇವೇರು ನಿತ್ಯಮುಕ್ತರಾದ ಕಾಲಕ್ಕೂ ಜೀವಲಕ್ಷಣವಾದ ಅಸ್ವತಂತ್ರಲಕ್ಷಣದಿಂದ " ಅಕ್ಷರಜೀವಳೆಂತ " ಕರಿಸೋಣದರಿಂದ " ಅನೀಶಜೀವರೆಂಬ " ಶಬ್ದದಿಂದ ರಮಾದೇವೇರೂ ಗ್ರಾಹ್ಯ. ರಮಾದೇವೇರಿಗೆ ಬ್ರಹ್ಮನಲ್ಲಿ, ಬ್ರಹ್ಮನಿಗೆ ರುದ್ರದೇವರಲ್ಲಿ, ಹೀಗೆ ತಾರತಮ್ಯಾನುಸಾರ ಅಸ್ವತಂತ್ರ ಚೇತನರಲ್ಲಿ ಈಶತ್ವ ಹೇಳಿದೆಯಲ್ಲಾ ಎಂದು ಅಕ್ಷೇಪ ಮಾಡಿದರೆ ಇವರಲ್ಲಿ 'ಸ್ವಾಧೀನ' ಈಶತ್ವ ಇಲ್ಲವೆಂಬುದೇ ಉತ್ತರವೇ ಹೊರತು ಅನ್ಯಾಧೀನವಾದ ಈಶತ್ವವಿಲ್ಲವೆಂದಲ್ಲ. ಅನ್ಯಾಧೀನ ಈಶತ್ವ ಉಂಟು ಎಂದೇ ಅರ್ಥ. 'ಅನೀಶರು' ಜೀವರೆಂದೇ ತಿಳಿಯ-ಬೇಕು. ಅನೀಶ ಶಬ್ದಕ್ಕೆ ಅರ್ಥದ್ವಯ. ಈ–ಪೂರ್ವೋಕ್ತ ಪ್ರಕಾರ **ಸುಜ್ಞಾನವೆ** ಸಮೀಚೀನ ಜ್ಞಾನವೆಂಬುದು ಇದೇನೆ. ಇಂಥಾ ಸುಜ್ಞಾನವನ್ನು ತಿಳಿದು ತದನುಷ್ಠಾನ ಮಾಡುವದೇ ಬದುಕಿದ್ದಕ್ಕೆ ಫಲವೆಂದು ತಾತ್ಪರ್ಯ.

(ಗು.) "ವಾಸನಾದ್ವಾಸುದೇವೋಸಿ" ಎಂಬ ಭಾರತ ವಾಕ್ಯದಂತೆ ಮಾಯಾ-ಪತಿ ಜಗದ್ವ್ಯಾಪಕ ಸರ್ವಭೂತನಿವಾಸಿ ಶ್ರೀವಾಸುದೇವನೇ ಬ್ರಹ್ಮರುದ್ರೇಂದ್ರಾದಿ ದೇವತೆಗಳ ಸಮೂಹಗಳಿಗೆ ಪರಮಮಂಗಳಕರವಾದ ಹರಿಸರ್ವೋತ್ತಮತ್ವ ಜ್ಞಾನ-ವನ್ನು ಕೊಟ್ಟು ಆ ಜ್ಞಾನದಿಂದ ಸ್ವರೂಪಾನಂದಾವಿರ್ಭಾವ ಮಾಡಿ ಮುಕ್ತಿಪ್ರದ-ನಾಗುವ ಶ್ರೀಹರಿ. ಇನ್ನು ದೈತ್ಯಸಮೂಹಕ್ಕೆ ಅಶುಭವಾದ ಅಜ್ಞಾನದಿಂದ ಅದ್ವೈತ ಮಾರ್ಗ ಪ್ರದರ್ಶನಮಾಡಿ ದುಃಖಸ್ವರೂಪ ವ್ಯಕ್ತಮಾಡಿ ದುರ್ಗತಿಯಾದ ಅಂಧಂ-ತಮಸ್ಸು ಕೊಡುವಂಥಾತ.

ಇಲ್ಲಿ ಪೂರ್ವಪಕ್ಷ ಶ್ರೀನಾರಾಯಣ ದ್ವೇಷಾಸೂಯರಹಿತನೆಂದು ಶ್ರುತಿಸ್ಮೃತಿ ಗಳಲ್ಲಿ ಉಕ್ತವಾಗಿದೆ. ದೇವತೆಗಳಿಗೆ ಶುಭಪ್ರದ, ದೈತ್ಯರುಗಳಿಗೆ ಅಶುಭಪ್ರದ. ಹೀಗೆ ಪಕ್ಷಪಾತ ಮಾಡಲು ಏನು ಕಾರಣವೆಂದು ಶಂಕಾ ಬಂದರೆ ಲೋಕದೃಷ್ಟಾಂತ. ಪೃಥಿವಿ ಅಪ್ಪು ತೇಜ ಆದಿ ಪಂಚಭೂತಗಳಲ್ಲೇ ಫಲಭೇದ ಕಂಡರೂ ದ್ವೇಷಾಸೂಯೆಗಳಿಲ್ಲ-ವೆಂದು ನಿರ್ಧಾರ ಹೇಗೋ ಭಗವಂತನಲ್ಲೂ ಹಾಗೆಂದು ತಿಳಿಯಬೇಕು. ಅದು ಹಾಗೆಂದರೆ ಭೂಮಿಯಲ್ಲಿ ನವಧಾನ್ಯಗಳನ್ನು ಬಿತ್ತತಾರೆ. ದಾವ ದಾವ ಬೀಜ-ಗಳಂತೆ ಸಸಿಗಳು ಭಿನ್ನ ಭಿನ್ನವಾಗಿ ಅಭಿವ್ಯಕ್ತವಾಗತವೆ. ಇದರಿಂದ ಭೂಮಿಗೆ ದ್ವೇಷಾಸೂಯಾ ದೋಷ ಬರತದೆಯೇ ? ಇಲ್ಲವಷ್ಟೆ. ಹೀಗೆಯೇ ಇಕ್ಷುದಂಡ (ಕಬ್ಬು) ಕದಳೀವೃಕ್ಷ, ಆಮ್ರವೃಕ್ಷ, ಬೇವಿನವೃಕ್ಷಗಳಿಗೆ ಒಂದೇ ಪ್ರಕಾರ ವೃಷ್ಟಿ ಆಗತದೆ. ಆದರೆ ದರದರ ಸ್ವಭಾವಾನುಸಾರ ತತ್ತದ್ರಸಗಳು ಅಭಿವ್ಯಕ್ತವಾಗತವೆ. ಇದೇ ರೀತಿ ಅಗ್ನಿಯಲ್ಲಿ ಪರಿಮಳದ್ರವ್ಯ ಹಾಕಿದರೆ ಸುಗಂಧ ವ್ಯಕ್ತವಾಗತದೆ. ದುರ್ಗಂಧದ ಲಶುನ (ಬೆಳ್ಳುಳ್ಳಿ) ಏವಮಾದಿ ಪದಾರ್ಥಗಳನ್ನ ಹಾಕಿದರೆ ಅದರಂತೆ

ವಾಸನೆ ತೋರತದೆ. ಇದರಿಂದ ಅಗ್ನಿಗೆ ದ್ವೇಷಾಸೂಯೆಯ ದೋಷಾರೋಪಣೆ ಮಾಡುವುದು ಹೇಗೆ ಅಯುಕ್ತವೋ ಭಗವಂತನಲ್ಲೂ ಹಾಗೆಯೇ. ಇಂಥ ಜಡ-ಪದಾರ್ಥಗಳಲ್ಲಿಯೇ ಈ ಪ್ರಕಾರ ಶ್ರೀಹರಿ ನಡೆಸತಾನೆ. ಇನ್ನು ನಿರ್ದೋಷ ಜ್ಞಾನಾನಂದಮಯ, ಕರುಣಾಸಮುದ್ರ, ಸರ್ವತ್ರಂತ್ರಸ್ವತಂತ್ರ ಶ್ರೀಲಕ್ಷ್ಮೀಪತಿಗೆ ದ್ವೇಷಾಸೂಯ ಹ್ಯಾಂಗೆ ಕೂಡತದೆ. ಆ ಸ್ವಾಮಿ ದೇವದೈತ್ಯರ ಸ್ವಭಾವಾನುಸಾರ ಶುಭಾಶುಭಪ್ರದನಾಗಿ ಸರ್ವಾಂತರ್ಯಾಮಿಯಾಗಿ ಅವರವರ ಸ್ವಭಾವಾನುಸಾರ ಅವರ-ವರಿಗೆ ಶುಭಾಶುಭ ಫಲಗಳನ್ನು ನೀಡತಾನಾದಕಾರಣ ಅವನಿಗೆ ಯಾವ ದೋಷವ ಅಟಲಾರದೆಂದು ತಿಳಿಯಬೇಕು.

ಸತ್ವರಜಸ್ತಮ ತ್ರಿವಿಧಜೀವರುಳ್ಳ ಚೇತನಾಚೇತನಾತ್ಮಕ ಸಮಸ್ತ ಜಗತ್ತಿಗೆ ಶ್ರೀಕೇಶವನೇ ಈಶನೆಂದೂ (ಅವನಿಗೆ ಬೇರೆ ಯಾರೂ ಈಶರಿಲ್ಲವೆಂದೂ—ಅನೀಶ) ವೇದದಲ್ಲಿ ಉಕ್ತವಾಗಿದೆಯೆಂದು ಜ್ಞಾನಿಗಳು ಕೊಂಡಾಡತಾರೆ. ಇದಕ್ಕೆ ವಿರುದ್ಧವಾಗಿ ಜೀವರು ಅನೀಶರು, ರಮಾಬ್ರಹ್ಮಾದಿಸಮಸ್ತರೂ ಅಸ್ವತಂತ್ರರು. ಆ ಹರಿಯ ದಾಸರು ಎಂಬ ಈ ಸಮೀಚೀನ ಜ್ಞಾನವೇ ಸುಜ್ಞಾನ. ಇಂಥಾ ಸುಜ್ಞಾನದಿಂದ ಲಕ್ಷ್ಮೀವಲ್ಲಭನ ಗುಣಗಳ ತಿಳಿದು ಭಜಿಸುವುದೇ ಫಲವಿದು ಬಾಳ್ದುದಕೆ.

ವಾಸವ—ದೇವೇಂದ್ರ, ಮುಖ—ಮೊದಲಾದ, ವಿಬುಧ—ದೇವತೆಗಳ, ನಿಚಯಕೆ—ಗುಂಪಿಗೆ, ಸಮೂಹಕ್ಕೆ, ಅನೀಶ— ೧. ಬೇರೆ ಈಶ (ಒಡೆಯ)ರಿಲ್ಲದವನು, ಸ್ವತಂತ್ರ. ೨. ಒಡೆಯನಲ್ಲದವನು, ದಾಸ, ಅಸ್ವತಂತ್ರ.

(ಭೀ.) 'ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ । ಏವಂ ಭೂತಾನಿ ಮಘವನ್ ಈಶತಂತ್ರಾಣಿ ವಿದ್ಧಿ ಭೋಃ ॥' ಎಂದರೆ "ಹೇ ಇಂದ್ರ, ಕಟ್ಟಿಗೆಯಿಂದ ಮಾಡಿದ ಹೆಣ್ಣುಗೊಂಬೆಯಂತೆಯೂ, ಕೀಲುಗಳಿಂದ ಚಲಿಸುವ ಮೃಗದಂತೆಯೂ ಜೀವರೆಲ್ಲರೂ ಈಶಾಧೀನರೆಂದು ತಿಳಿ" ಎಂದು ಭಾಗವತದಲ್ಲೂ, "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥" ಎಂದರೆ "ಹೇ ಅರ್ಜುನ, ಶ್ರೀಹರಿಯು ಸಕಲ ಪ್ರಾಣಿಗಳ ಹೃದಯದಲ್ಲಿದ್ದು, ತನ್ನ ಇಚ್ಛೆಯಂತೆ ಅವರೆಲ್ಲರನ್ನೂ ಯಂತ್ರಾಧೀನವಾದವರಂತೆ ಸುತ್ತಿಸುತ್ತಾನೆ" ಎಂದು ಭಗವದ್ಗೀತೆ-ಯಲ್ಲೂ ಹೇಳಿರುವಂತೆ ಶ್ರೀಹರಿಯೊಬ್ಬನೇ ಸ್ವತಂತ್ರನೆಂದೂ ಇತರ ಸಮಸ್ತರೂ ಅವನ ಅಧೀನರೆಂದೂ ತಿಳಿದು ಬರುತ್ತದೆ.

**ಮನೋವಾಕ್ಕಾಯದೊಳ(ದಲ)ನುಭವಿಸುವ ದಿನ ।**
**ದಿನದಿ ವಿಷಯ ಸಾಧನಗಳನು ॥**

**ಅನಿಲಾಂತರ್ಗತ ವನರುಹದಳ ಲೋ ।**
**ಚನಗರ್ಪಿಸಿ ನಾ ದಾಸ(ದಾಸನು ನಾ) ನೆಂಬುದೇ ॥೪॥**

(ಇದು ಇತರ ಆವೃತ್ತಿ (ಪಾಠ)ಗಳಲ್ಲಿ ಮೂರನೇಯ ನುಡಿಯೆಂದಿದೆ)

**ಮನೋವಾಕ್ಕಾಯ**—ಮನಸ್ಸು, ವಾಗಿಂದ್ರಿಯ, ಕಾಯ ಶಬ್ದದಿಂದ ದೇಹಕ್ಕೆ ಅನುಸರಿಸಿದ ಉಳಿದ ಒಂಬತ್ತು ಇಂದ್ರಿಯಗಳು, ಅಂತು ಏಕಾದಶೇಂದ್ರಿಯ-ಗಳು, **ದೊಳು**—ಇವುಗಳಿಂದ, **ಅನುಭವಿಸುವ**—ಅನುಭವಮಾಡತಕ್ಕ, **ದಿನದಿನದಿ**—ಪ್ರತಿದಿನದ ಲಕ್ಷಣದ, **ವಿಷಯ**—ನೇತ್ರಕ್ಕೆ ನೋಡೋಣ ವಿಷಯ, ಶ್ರವಣಕ್ಕೆ ಕೇಳೋಣ ವಿಷಯ, ಜಿಹ್ವೆಗೆ ರಸ ಆಸ್ವಾದನ ವಿಷಯ, ಹೀಗೆ ಏತಾದೃಶ ಇಂದ್ರಿಯ-ಗಳಿಂದ ಭೋಗಮಾಡತಕ್ಕ ಏತಾದೃಶ ವಿಷಯಗಳ, **ಸಾಧನಗಳನು**—ವಿಷಯ-ಗಳಿಗೆ ಸಾಧನಗಳೆಂದರೆ, ಕಣ್ಣಿಗೆ ರಕ್ತ ನೀಲಾದಿ ದ್ರವ್ಯಗಳು, ಕಿವಿಗೆ ಶಬ್ದಾದಿಗಳು, ಜಿಹ್ವೆಗೆ ಷಡ್ರಸಾದಿಗಳು, ಇವೇಯೇ ವಿಷಯಸಾಧನಗಳು. ಇಂಥ ವಿಷಯಸಾಧನ-ಗಳು, ವಿಷಯಗಳು ಅವುಗಳ ಭೋಗಗಳು, ಇದೇ ಪ್ರಕಾರ ಏಕಾದಶೇಂದ್ರಿಯ-ಗಳಿಗೂ ಯೋಜನಾ ಮಾಡಿಕ್ಕೊಳ್ಳಬೇಕು. ಈ ವಿಧ ವಿಭಜನದಿಂದ ತಿಳಿದವನಾಗಿ ಆಯಾ ಇಂದ್ರಿಯಾಂತರ್ಗತನಾದ, **ಅನಿಲಾಂತರ್ಗತ**—ಭಾರತೀರಮಣ ಮುಖ್ಯ-ಪ್ರಾಣಾಂತರ್ಗತನಾದ, **ವನರುಹದಳಲೋಚನಗೆ**—ಕಮಲದಳಗಳೋಪಾದಿಯಲ್ಲಿ ವಿಕಾಸವಾದ ನೇತ್ರಗಳುಳ್ಳ ಪರಮಾತ್ಮನಿಗೆ, **ಅರ್ಪಿಸಿ**—ಆಯಾ ಭಗವದ್ರೂಪಗಳಿಗೆ ಐಕ್ಯಚಿಂತನ ಮಾಡುತಾ, **ನಾ ದಾಸನೆಂಬುದೇ**—(ಅವನ) ದಾಸನು ನಾನೆಂಬೋದೇ, ಅನಾದ್ಯನಂತಕಾಲದಿಂದಲೂ 'ದಾಸೋಽಹಂ' ಎಂಬ ಸ್ವಭಾವವೇ ಹೊರತು 'ಸೋಽಹಂ' ಎಂಬ ಸ್ವಭಾವದವನಲ್ಲ ಎಂದು ಪ್ರಾರ್ಥಿಸಿ ಉಪಾಸನಾ ಮಾಡೋಣವೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ. ಸರ್ವದಲ್ಲಿ, ಸರ್ವವಿಷಯದಲ್ಲಿಯೂ ಇದೇ ಅನುಸಂಧಾನವಿರಬೇಕು.

(ಗು.) ಪ್ರತಿ ಪ್ರತಿ ದಿವಸಗಳಲ್ಲಿ ಮನಸ್ಸಿನಿಂದ ಅನುಭವಿಪ ವಿಷಯಗಳನ್ನ ಮನೋಭಿಮಾನಿ ಸದಾಶಿವನಂತರ್ಗತ ಶ್ರೀಸೀತಾಪತಿ ಶ್ರೀರಾಮಚಂದ್ರದೇವರಿಗೆ ನಿಯೋಗಿಸಿ ಕಾಯಾ ವಾಚಾ ಮನಸಾ ತ್ರಿಕರಣಶುದ್ಧಿಯಿಂದ ತನ್ನಿಂದಾಗೋ ಸಾಧನಗಳನ್ನ ಭಾರತೀರಮಣಮುಖ್ಯಪ್ರಾಣಾಂತರ್ಗತ ನಾರಾಯಣಗೆ ಸಮರ್ಪಣ-ಮಾಡಿ ಅಹಂಭಾವ ಮೊದಲಾದ ಅರಿಷಡ್ವರ್ಗಗಳ ತ್ಯಜಿಸಿ ನಾರಾಯಣನ ಆಜ್ಞಾ-ಧಾರಕನಾಗಿ ಹರಿದಾಸನೆಂಬುವದು ಸಫಲ. ಕಾಯಾ ವಾಚಾ ಮನಸಾ ಅನುಭವ-ಮಾಳ್ಪ ವಿಷಯಸಾಧನಗಳನ್ನ ದಾವ ಪ್ರಕಾರ ಶ್ರೀಹರಿಗೆ ಸಮರ್ಪಣ ಮಾಡಬೇಕೆಂದರೆ ಚತುರ್ವಿಂಶತಿತತ್ವಗಳಲ್ಲಿ ತತ್ವಪತಿಗಳ ಅಂತರ್ಗತನಾದ ಶ್ರೀನಾರಾಯಣ ಪ್ರೇರ್ಯ-

ಪ್ರೇರಕನೆಂದು ಮಹಾವಿಶ್ವಾಸ ಪೂರ್ವಕ ಜ್ಞಾನಭಕ್ತಿಯಿಂದ ಆ ಸ್ವಾಮಿಯ ಮಹಾ-ಮಹಿಮೆಗಳ ತಿಳಿದು ಸ್ತೋತ್ರ ಮಾಡಿ ಮುಕ್ತಿಯೆಂಬ ಫಲವೈದೋದು ಬಾಳ್ದುದಕೆ ಫಲ. ಕಾಯಾ ವಾಚಾ ಮನಸಾ ಮೂರರೊಳಗೆ ಒಂದು ಕರಣರಹಿತವಾದರೆ ಫಲ-ರಹಿತವಾಗಿ ನಿಷ್ಫಲವಾಗುವುದು.

ಅನಿಲಾಂತರ್ಗತ–( ಭಾರತೀರಮಣ ಮುಖ್ಯ ) ಪ್ರಾಣಾಂತರ್ಗತ. ಅನಿಲ–ವಾಯು, ವನ-ರುಹ-ದಳ-ಲೋಚನ – ವನ-ನೀರಿನಲ್ಲಿ, ರುಹ - ಬೆಳೆಯುವುದು. ವನರುಹ-ಕಮಲ. ಅದರ ದಳದಂತೆ, ಲೋಚನ-ಕಣ್ಣುಗಳುಳ್ಳವನು (ಪುಂಡರೀಕಾಕ್ಷ –ವಿಷ್ಣು )

(ಟೀ) ೧. 'ಅಮೋಘಃ ಪುಂಡರೀಕಾಕ್ಷಃ' 'ಪದ್ಮನಾಭೋಽರವಿಂದಾಕ್ಷಃ' (ವಿಷ್ಣು ಸಹಸ್ರನಾಮ) ಎಂಬಂತೆ ಕಮಲದಳಲೋಚನವೆಂಬ ಶಬ್ದವು ಆ ಶ್ರೀಹರಿಯ ನಿತ್ಯಾನಂದ ಸೂಚಕವಾಗಿದೆ. ೨. ಜೀವನು ನಿತ್ಯಬದ್ಧನೆಂದು ತಿಳಿಯುವುದೇ ದಾಸ ಭಾವವು.

**ಪಂಚಭೇದಯುತ ಪ್ರಪಂಚವು (ಸು) ಸತ್ಯ ವಿ ।**
**ರಿಂ(ರಂ)ಚಿ ಭವಮುಖ (ರು) ಬಲಿ ವಂಚಕಗೆ ॥**
**ಸಂಚಲ (ಚಂಚಲ) ಪ್ರತಿಮೆ ಅಚಂಚಲ ಪ್ರಕೃತಿಯು ।**
**ಸಂಚಿಂತಿಸಿ ಮುದ(ಮೂ)ಲಾಂಛಿತನಹುದೆ ॥೫॥**

**ಪಂಚಭೇದ** – ಎಂಬುದು ಜೀವ ಪರಮಾತ್ಮರಲ್ಲಿ ತಿಳಿಯತಕ್ಕ ಭೇದವು. ಜೀವರ ನಾಶರಹಿತವಾದ ಅನಾದಿಸ್ವರೂಪವನ್ನು ಅನುಸರಿಸಿ ಹೇಳಿದ್ದು. ಪಂಚ ಭೇದಕ್ಕೆ ವಿವರ; ಜೀವರು ಎರಡು ಪ್ರಕಾರ. (i) ಸ್ಥಾವರ ಎಂತಲೂ (ii) ಜಂಗಮ ಎಂತಲೂ ಎರಡು ಪ್ರಕಾರ. ಎಂಭತ್ತನಾಲ್ಕುಲಕ್ಷ ಯೋನಿಜಾತರಾದ ತ್ರಿವಿಧ ಜೀವರು ಇದರಲ್ಲೇ ಅಂತರ್ಭೂತರು. ಸ್ಥಾವರ ಎಂದರೆ ವೃಕ್ಷಾದಿ ಜೀವರು; ಚಲನಾದಿಗಳನ್ನು ಮಾಡದೇ ಉತ್ಪತ್ತಿಸ್ಥಾನದಲ್ಲೇ ವೃದ್ಧಿಕ್ಷಯಾದಿಗಳು ಆಗತಾ ಇರತಕ್ಕ ಲಕ್ಷಣ ಉಳ್ಳವರು. ಇದು ಅನುಭವಾರ್ಥ ಲೋಕದೃಷ್ಟಾಂತ ತೋರಿಸಿದ್ದು. ವೃಕ್ಷಾದಿ 'ಸ್ವರೂಪ'ದಿಂದ ಅನಾದ್ಯನಂತ ಕಾಲಕ್ಕೂ ನಾಶರಹಿತವಾದ ಸ್ವರೂಪ ಸ್ವಭಾವವುಳ್ಳ ಜೀವರು 'ಸ್ಥಾವರ' ಜೀವರು. 'ಜಂಗಮ' ಜೀವರು ಇದ್ದಲ್ಲಿರದೇ ಕರಚರಣಾದಿ ಅವಯವ ಯುಕ್ತರಾಗಿ ಇತಸ್ತತಃ ಸಂಚರಿಸತಕ್ಕವರು; ಇದು ಲೋಕ-ದೃಷ್ಟಾಂತ, ಹೇಗೋ ಹಾಗೆ ಸ್ವರೂಪಸ್ವಭಾವದಲ್ಲಿ ಕರಚರಣಾದಿ ಅವಯವವಿಶಿಷ್ಟರಾಗಿ ಇರತಾರೆ, ಇವರು ಚಲನ ಸ್ವಭಾವದವರು. ಅಂತೂ ಉಭಯ ವಿಧ ಜೀವರು. ಉಭಯವಿಧದಲ್ಲಿ, ಒಂದೊಂದರಲ್ಲಿ ಅವಾಂತರಭೇದಗಳು ಅಸಂಖ್ಯಾತವಾಗಿ ಇರತವೆ.

ಸ್ಥಿತಿಕಾಲದಲ್ಲಿ ಸ್ಥಾವರಜೀವರಿಗೆ ಜಂಗಮದೇಹವೂ, ಜಂಗಮಜೀವರಿಗೆ ಸ್ಥಾವರ-ದೇಹವೂ ಕರ್ಮವಶಾತ್ ಬರೋದಾಗತದೆ. ಆಯಾ ಜೀವರಿಗೆ ಆಯಾ ದೇಹವೇ ಬರತದೆ ಎಂಬ ನಿಯಮವಿಲ್ಲ. ಪಂಚಭೇದ ಎಂದರೆ—(i) ಜೀವ–ಜೀವ ಭೇದ ಅಂದರೆ ಜಂಗಮ – ಜಂಗಮರಲ್ಲಿಯೇ ಭೇದ. ಗಜ – ಮನುಷ್ಯರಂತೆ. ಇದು ಸಮೂಹವನ್ನು ಅನುಸರಿಸಿದ ಭೇದವು. ಅವಾಂತರಭೇದವೆಂದರೆ (ಚತುಷ್ಪಾದ-ಗಳಲ್ಲಿ) ಆನಿಗೆ–ನಾಯಿ, ಜೀವ–ಜೀವ ಭೇದ ಒಂದು. (ii) ಇದರಂತೆ ಒಂದು ಜಡ-ಜೀವಕ್ಕೂ ಇನ್ನೊಂದು ಜಡಜೀವಕ್ಕೂ ಭೇದ. (iii) ಜಡಕ್ಕೂ, ಚೇತನ ಜೀವಕ್ಕೂ ಪೂರ್ವೋಕ್ತ ಪ್ರಕಾರ ಭೇದ ಒಂದು. (iv) ಜಡ(ಜೀವ)ಕ್ಕೂ ಪರಮಾತ್ಮನಿಗೂ ಭೇದ ಒಂದು. (v) ಚೇತನಜೀವಕ್ಕೂ ಪರಮಾತ್ಮಗೂ ಭೇದ ಒಂದು. (ಮುಂದಿನ ಪುಟದಲ್ಲಿ ಜಡ ಪ್ರಕೃತಿಯೆಂಬುದು ಜಡ–ಜೀವ ಶಬ್ದದಿಂದ ಗ್ರಾಹ್ಯ-ವೆಂದಿದ್ದಾರೆ. ಹೀಗೆ ಪಂಚಭೇದ ಸರಿಯಾಯಿತು.) ಲಕ್ಷ್ಮೀದೇವೇರ ಭೇದ ಹೇಳಲಿಲ್ಲ-ವೆಂದರೆ ರಮಾದೇವೇರು ಜೀವಲಕ್ಷಣವಾದ ಅಸ್ವತಂತ್ರ ಲಕ್ಷಣದಿಂದ ಯುಕ್ತರಾದವ-ರಾದ್ದರಿಂದ ಜೀವ-ಜೀವರ ಭೇದದಲ್ಲಿ ಅಂತರ್ಭೂತರೆಂದು ಒಂದು ಪಕ್ಷ. ಮತ್ತೊಂದು ಪಕ್ಷದಲ್ಲಿ ರಮಾದೇವೇರು ಅಕ್ಷರಳು. ಈಶಕೋಟಿಪ್ರವಿಷ್ಟಳು. ಅಕ್ಷರರಾದ ರಮಾಮಧುಸೂದನರಿಗೆ ಪೃಥಕ್, ಭೇದವೆಂದೂ, ಈ ರೀತಿ ಆರು ಭೇದವೆಂದು ಗಣನೆ, ಹೇಗಿದ್ದರೂ ಪ್ರಮೇಯವಿರುದ್ಧವಲ್ಲ. ಅಕ್ಷರಳಾಗಿದ್ದರಿಂದ ಈಶಕೋಟಿ-ಪ್ರವಿಷ್ಟಳು. ಅಸ್ವತಂತ್ರಳಾದ್ದರಿಂದ ಜೀವಕೋಟಿಪ್ರವಿಷ್ಟಳು. ಹೀಗೆ ಉಭಯವೂ ಉಂಟು. ಹೇಗೆ ಸಮನ್ವಯ ಮಾಡಿದರೂ ಬಾಧಕವಿಲ್ಲ. ಶಾಸ್ತ್ರವಿರುದ್ಧವೂ ಅಲ್ಲ. ಪಂಚಭೇದ ಹೇಳೋಣದರಿಂದ ತಾರತಮ್ಯವು ಅರ್ಥಾತ್ ಸಿದ್ಧವು. ಇರುವೆ ಕಡಿಮೆ, ಆನೆಯು ದೊಡ್ಡದೆಂದು ತಾರತಮ್ಯವನ್ನು ಉಚ್ಚಾರ ಮಾಡದಿದ್ದರೂ ಅರ್ಥಾತ್ ಸಿದ್ಧವಿರುವಂತೆ ಪಂಚಭೇದ ಹೇಳೋಣದರಿಂದ ತಾರತಮ್ಯವು ಸಿದ್ಧವೆಂದು ಹೇಳಿ-ದಂತಾಯಿತು. 'ತಾರತಮ್ಯ' ಎಂದರೆ ಇವನಕ್ಕಿಂತ ಅವನು ಬಲಜ್ಞಾನಾದಿಗಳಿಂದ ಉತ್ತಮ (ಅಥವಾ ಕಡಿಮೆ) ಯಂತ ತಾತ್ಪರ್ಯ. ತೃಣಜೀವರಾರಂಭಿಸಿ ತಾರ-ತಮ್ಯಾನುಸಾರ ಪರಮಾತ್ಮನು ಸರ್ವೋತ್ತಮ. ಅವನಿಗೆ ಉತ್ತಮರಾರೂ ಇಲ್ಲವೇ ಇಲ್ಲ. ಮತ್ತು '**ಯುತ**' ಎಂಬ ಪದಪ್ರಯೋಗದಿಂದ ಪಂಚಭೇದವೆಂಬುದು ತಾರತಮ್ಯ ಯುಕ್ತವಾದದ್ದು ಎಂದಂತಾಯಿತು. ಇಲ್ಲಿ 'ಯುತ' ಶಬ್ದವನ್ನು ಆವರ್ತನ ಮಾಡಿಕೊಳ್ಳಬೇಕು. **ಪ್ರಪಂಚ**–ಪ್ರಕೃಷ್ಟವಾದ ಪಂಚವಿಧ ಜೀವರು :— (1) ಬ್ರಹ್ಮನಾರಭ್ಯ ಶತಸ್ಥ ಪರ್ಯಂತ ತತ್ವೇಶರು 'ದೇವ' ಶಬ್ದ ವಾಚ್ಯರು. (2) ಬಲ್ಯಾದಿ ಪುಷ್ಕರಾಂತರು ಕರ್ಮಜದೇವತೆಗಳು. (3) ದೇವಯೋನಿಜರಾದ ಆಜಾನಜರು ದೇವಗಂಧರ್ವರ ಪರ್ಯಂತ. (4) ಮಾನುಷ ಗಂಧರ್ವರಾರಭ್ಯ ಮನುಷ್ಯೋತ್ತಮರವರೆಗೂ, ಮತ್ತು (5) ಪಶ್ವಾದಿ ತೃಣಾಂತರವರೆಗೂ ಏಕ-

ಬಿಂಬೋಪಾಸಕರೆಂದು ಹೀಗೆ ಪಂಚವಿಧಜೀವರು. ತ್ರಿವಿಧರು ಯೋಗ್ಯ ಅಯೋಗ್ಯರೆಂಬ ಭೇದದಿಂದ ಆಯಾ ಸಮೂಹಭೇದದಿಂದ ಇದರಲ್ಲಿ ಅಂತರ್ಭೂತರೆಂದು ತಿಳಿಯಬೇಕು. ಇದು **ಸುಸತ್ಯ** – ಈವಿಧ ತ್ರಿವಿಧ ಜೀವರು ಪೂರ್ವೋಕ್ತ ಪ್ರಕಾರ ತಾರತಮ್ಯ ಪಂಚಭೇದದಿಂದ ನಾಶರಹಿತರಾಗಿ ಛಂದಾಗಿ ಸತ್ಯರಾಗಿರತಕ್ಕವರು ಎಂದರ್ಥ. **ವಿರಿಂ(ರಂ)ಚಿಭವ ಮುಖ**-ಬ್ರಹ್ಮರುದ್ರ ಮೊದಲಾದವರಿಂದಾರಂಭಿಸಿ ತೃಣಾಂತ ತ್ರಿವಿಧ ಜೀವರು, **ಬಲಿವಂಚಕಗೆ** – ಬಲಿಯನ್ನು ವಂಚಿಸಿದ ವಾಮನ ದೇವರಿಗೆ. **ಸಂಚಲ**–('ಚಂಚಲ' ವೆಂಬುದು ಪಾಠಭೇದವೆಂದು ಇದರಿಂದ ತೋರುತ್ತಿದೆ.) ಪರಮಾತ್ಮಗೆ ಆವಾಸಕ್ಕೆ ಯೋಗ್ಯ ಅಧಿಷ್ಠಾನಭೂತರಾದ, ಸಂ ಉತ್ಕೃಷ್ಟರಾದ ಬ್ರಹ್ಮಾದಿ ಜಂಗಮಜೀವರು, **ಚಲಪ್ರತಿಮೆ**–ಚಲನ ಮಾಡತಕ್ಕ ಪ್ರತಿಮಾ ಎಂತಲೂ, **ಅಚಂಚಲ** – ಚಲನರಹಿತರಾದ ವೃಕ್ಷಾದಿ ಸ್ಥಾವರ ಜೀವರೆಂತಲೂ, **ಪ್ರಕೃತಿಯು**–ಪ್ರಕೃತಿ ಶಬ್ದದಿಂದ ರಮಾದೇವೇರು ಗ್ರಾಹ್ಯ, ರಮಾದೇವೇರೂ ಕೂಡ ಪ್ರತಿಮಾ ಸಾದೃಶ್ಯರು. ಪ್ರಕೃತಿ ಶಬ್ದದಿಂದ ಜಡಪ್ರಕೃತಿಯು ಅಚಂಚಲಪ್ರಕೃತಿಯೆಂದೂ ಗ್ರಾಹ್ಯವೇ. ಪಂಚಭೇದ ಹೇಳಿದ ಸ್ಥಾನಗಳಲ್ಲಿ ಜಡಪ್ರಕೃತಿಯೆಂಬುದು ಜಡ-ಜೀವ ಶಬ್ದದಿಂದ ಗ್ರಾಹ್ಯವು. ಈ ಪ್ರಕಾರ ಸಂಚಲ ಪ್ರತಿಮೆ-ಅಚಂಚಲ ಪ್ರತಿಮೆ (ಪ್ರಕೃತಿ) ಎಂಬೋಣದರಿಂದ ಸ್ಥಾವರಜೀವರು ಜಂಗಮಜೀವರು, ರಮಾದೇವೇರು, ಜಡಪ್ರಕೃತಿ ಹೀಗೆ ಸರ್ವವೂ ಪರಮಾತ್ಮಗೆ (ಬಲಿವಂಚಕಗೆ) ಪ್ರತಿಮಾರೂಪವೆಂದರ್ಥ. **ಸಂಚಿಂತಿಸಿ**–ಪೂರ್ವೋಕ್ತ ಪ್ರಕಾರ ಬಿಂಬರೂಪಿ ಹರಿಯನ್ನು ಹೃದಯದಲ್ಲಿ ಛಂದಾಗಿ ಧ್ಯಾನಪೂರ್ವಕ ಚಿಂತಿಸಿ, **ಮುದಲಾಂಛಿತ**–ಸಂತೋಷಪಡುವದೇ, ('ಮೂಲಾಂಛಿತ' ಪಾಠಭೇದ, ಅಹಂ ಮಮ ಎಂಬುದರ ಮೂಲವನ್ನು ಛೇದಿಸುವುದೇ) ಬದುಕಿದ್ದಕ್ಕೆ ಫಲ.

(ಗು.) ಪಂಚಭೇದ ಹೇಗೆಂದರೆ:— ೧. ಜೀವಜೀವರಿಗೆ ಭೇದ. ೨. ಜಡಜಡ ಭೇದ. ೩. ಜೀವಜಡ ಭೇದ. ೪. ಜೀವೇಶ್ವರರಿಗೆ ಭೇದ. ೫, ಜಡಪರಮಾತ್ಮಗೆ ಭೇದ. ಈ ಪ್ರಕಾರ ಭೇದ ಸತ್ಯ. ಈ ಭೇದ ಅನೇಕ ಪ್ರಕಾರವಾಗಿ ಸ್ಪಷ್ಟವಾಗಿದೆ.

ಪಂಚಭೇದಗಳ ವಿವರ

೧. ಜೀವಜೀವರಿಗೆ ಭೇದ — ಜೀವರು ಸಾತ್ವಿಕ–ರಾಜಸ–ತಾಮಸರು ಎಂದು ಮೂರು ಪ್ರಕಾರ.

೨. ಜೀವರೊಳಗೆ ಸ್ಥಾವರ [ಅಚಲರು] ಜಂಗಮ [ಚಲರು] ಎಂದು ಭೇದ.

೩. ಜಂಗಮಜೀವರೊಳಗೆ ಪುರುಷರು. ಸ್ತ್ರೀಯರು ಎಂದು ಎರಡು ಭೇದ.

೪. ಸ್ಥಾವರರೊಳಗೆ ತೃಣ ವೃಕ್ಷಾದಿಗಳು, ಶಿಲಾ ಪರ್ವತಾದಿಗಳು ಎಂದು ಎರಡು

ಭೇದ. ತೃಣ ವೃಕ್ಷಾದಿಗಳಿಗೆ ವೃದ್ಧಿ ನಾಶ ಉಂಟು, ಶಿಲಾದಿಗಳಿಗೆ ವೃದ್ಧಿಯು ವರ್ಜ್ಯ.

೫. ಜೀವ-ಜಡ ಭೇದ ಹೇಗೆಂದರೆ ಜೀವರು ಚೇತನರು, ಜಡ ಅಚೇತನ.

೬. ಜೀವೇಶ್ವರರಿಗೆ ಭೇದ ಹೇಗೆಂದರೆ ಜೀವ ಅಸ್ವತಂತ್ರ, ಪರಮಾತ್ಮ ಸ್ವತಂತ್ರ—ಸರ್ವೇಶ.

ಆದಿನಾರಾಯಣಗೆ **ಸಂಚಲ ಪ್ರತಿಮೆ** ಬ್ರಹ್ಮರುದ್ರೇಂದ್ರಾದಿಗಳು ಸಮೀಚೀನವಾದ ಚಲನಪ್ರತಿಮೆಗಳು. ಪ್ರಕೃತಿಸಂಬಂಧವಾದ ತ್ರಿಗುಣಗಳು ಅಚಲ ಪ್ರತಿಮೆಗಳು ಎಂದು **ಸಂಚಿಂತಿಸಿ**—ಸಮೀಚೀನವಾದ ಜ್ಞಾನ ಭಕ್ತಿ ಪುರಸ್ಸರ ಚಿಂತನ ಮಾಡಿ 'ಮುದಲಾಂಛನವಾಹಗೆ' ಉನ್ಮಾಹವೆಂಬೋ ಆನಂದೋದ್ರೇಕವುಳ್ಳವನಾಗಿ ಲೋಲಾಡುವದೆ ಫಲವಿದು ಬಾಳ್ದುದಕೆ "ಜಲಜನಾಭನಿಗೆರಡು ಪ್ರತಿಮಿ-ಗಳಿಯೊಳಗೆ ಜಡ ಚೇತನಾತ್ಮಕ।ಅಚಲದೊಳೀರ್ವಗೆ" ಎಂದು ದಾಸಾರ್ಯರ ವಚನ.

ವಿರಿಂಚಿ—ಬ್ರಹ್ಮದೇವರು, ಮುಖ—ಮೊದಲಾದ, ಬಲಿವಂಚಕಗೆ—ಬಲಿಯನ್ನು ವಂಚಿಸಿದ, ವಾಮನನಿಗೆ—ಶ್ರೀಹರಿಗೆ.

[ಭೀ.] ೧. 'ಪ್ರಪಂಚೋ ಭೇದಪಂಚಕಃ' ಎಂಬ ಪ್ರಮಾಣದಂತೆ ಪ್ರ—ಪ್ರಕೃಷ್ಟವಾದ, ಸ್ಪಷ್ಟವಾದ, ಪಂಚ – ಐದು ಭೇದವುಳ್ಳದ್ದಾದ್ದರಿಂದಲೇ ಜಗತ್ತಿಗೆ 'ಪ್ರಪಂಚ'ವೆಂದು ಹೆಸರು. ೨. ಸುಸತ್ಯ—ಅದ್ವೈತ ಮತದಲ್ಲಿ ಸತ್ಯವೇ ಎರಡು ಪ್ರಕಾರ—ವ್ಯಾವಹಾರಿಕ ಸತ್ಯ, ಪಾರಮಾರ್ಥಿಕ ಸತ್ಯ. ಹೆಸರಿಗೆ ಮಾತ್ರ ಸತ್ಯ-ವಾದುದು, ಸ್ವಪ್ನದಲ್ಲಿ ಕಂಡ ಹಣದಂತೆ ಅಥವಾ ಕಪ್ಪೆಚಿಪ್ಪಿನಲ್ಲಿ ಕಾಣುವ ಬೆಳ್ಳಿ-ಯಂತೆ ನಿಜವಾಗಿ ಸತ್ಯವಾದುದು ಬ್ರಹ್ಮ ಒಂದೇ ಎನ್ನುತ್ತಾರೆ. ಇಲ್ಲಿ ಸುಸತ್ಯ ಎಂದರೆ ಅವರು ಹೇಳುವ ಪಾರಮಾರ್ಥಿಕ ಸತ್ಯ ಎಂದರೆ ಪ್ರಮಾಣಸಿದ್ಧವಾದ ಸತ್ಯ ಎಂದರ್ಥ. ೩. ಶ್ರೀಹರಿಯ ಪ್ರತಿಮೆಗಳು ಚಲ—ಅಚಲಗಳೆಂದು ಎರಡು ವಿಧವಾಗಿರುವುವು. ಶ್ರೀಹರಿಯ ಮಹಾತ್ಮ್ಯಜ್ಞಾನವು ದೃಢವಾಗಿರುವ ದೇವ ಋಷ್ಯಾದಿಗಳೂ ಸನಕಾದಿ ಮಹಾಯೋಗಿಗಳೂ ಶ್ರೀಹರಿಗೆ ಚಲಪ್ರತಿಮೆಗಳು. ಶಾಲಗ್ರಾಮಗಳೂ. ಶ್ರೀಮುಷ್ಣ ತಿರುಪತಿ ಮೊದಲಾದ ಸ್ವಯಂವ್ಯಕ್ತ ಮೂರ್ತಿಗಳೂ, ವಿಧ್ಯುಕ್ತರೀತ್ಯಾ ಆವಾಹನಾದಿ ವಿಧಿಗಳಿಂದ ಹರಿಯ ಸಾನ್ನಿಧ್ಯವುಳ್ಳ ಶಿಲಾಲೋಹಾದಿ ಪ್ರತಿಮೆಗಳೂ ಅಚಲ ಪ್ರತಿಮೆಗಳೆನಿಸುತ್ತವೆ. ಈ ಉಭಯವಿಧ ಪ್ರತಿಮೆಗಳ ಯಥಾರ್ಥತೆಯನ್ನು ತಿಳಿದುಕೊಂಡು ಅರ್ಚಿಸಬೇಕು.

**ಪಂಚ ಋತುಗಳಲಿ ಪಂಚಾಗ್ನಿಗಳಲಿ ।**
**ಪಂಚ ಪಂಚರೂಪವ ತಿಳಿದು ॥**

**ಪಂಚ ಸುಸಂಸ್ಕಾರಾಂ[ರಂ]ಚಿತನಾಗಿ ದ್ವಿ |**
**ಪಂಚ ಕರಣದಲಿ ಪಂಚಕನರಿವು[ವ]ದೆ ||೬||**

**ಪಂಚ ಋತುಗಳಲಿ**–ಋತುಗಳು ಆರು. ಇಲ್ಲಿ ಐದೆಂದು ಪ್ರಯೋಗ ಹೇಗೆಂದರೆ. ಆರು ಋತುಗಳು ನಿಜವೆ, ವಿವಕ್ಷಾಭೇದದಿಂದ ಐದು ಋತುಗಳೆಂದಿದ್ದಾರೆ. ಹೇಗೆಂದರೆ ಆರು ಋತುಗಳಲ್ಲಿ ಶರತ್–ಹೇಮಂತ ಎರಡು ಋತುಗಳು ಸಮಾನ ಧರ್ಮವುಳ್ಳವಾದ್ದರಿಂದ. ಆ ವಿವಕ್ಷೆಯಿಂದ ಎರಡು ಋತುಗಳನ್ನು ಒಂದು ಋತು-ವೆಂತಲೂ, ಉಳಿದ ನಾಲ್ಕು ಭಿನ್ನ ಭಿನ್ನ ಧರ್ಮವುಳ್ಳವಾದ್ದರಿಂದ ನಾಲ್ಕು ಋತುಗಳು ಎಂತಲೂ ಅಂತೂ ಐದು ಋತುಗಳು ಎಂದಿಲ್ಲಿ ಅರ್ಥ. ಮಾಸಸಂಕೇತದಿಂದ ಆರು. ಧರ್ಮಸಂಕೇತದಿಂದ ಐದು ಋತುಗಳು. ಈ ಋತುಗಳನ್ನು ಯಾಕೆ ಹೇಳಬೇಕೆಂದರೆ [ಸಾಧಕರು ತಮ್ಮ] ಆಯುಸ್ಸನ್ನು ಪರಮಾತ್ಮನಿಗೆ ಅರ್ಪಿಸಿ, ಅದನ್ನು ಸಾರ್ಥಕ್ಯ ಮಾಡಿಕೊಳ್ಳಬೇಕೆಂಬಾಶಯದಿಂದ ಹೇಳಿದ್ದು. **ಪಂಚಾಗ್ನಿಗಳಲಿ** – ಉದರ ಪೋಷಣೆಗಾಗಿ ಭುಂಜಿಸಿದ ಯಾವತ್ತೂ ಪದಾರ್ಥಗಳು ಭಗವದರ್ಪಿತಮಾಡಿ ಸಾರ್ಥಕ್ಯ ಪಡೆಯಬೇಕೆಂದು ಉದ್ದೇಶ. ಈ ಪಂಚಾಗ್ನಿಗಳು 1. ಮುಖದಲ್ಲಿ ಆಹವನೀಯಾಗ್ನಿ, 2. ಹೃದಯದಲ್ಲಿ ಗಾರ್ಹಸ್ಪತ್ಯಾಗ್ನಿ, 3. ನಾಭಿಯಲ್ಲಿ ದಕ್ಷಿಣಾಗ್ನಿ, 4. ಸವ್ಯ (ಬಲ) ಪಾರ್ಶ್ವದಲ್ಲಿ ನಾವಸತ್ತಿ, 5. ವಾಮ (ಎಡ) ಭಾಗದಲ್ಲಿ ಸಭ್ಯಂಚಿತಿ. ಅಂತೂ ಹೀಗೆ ದೇಹಗತ ಐದು ಅಗ್ನಿಗಳು. **ಪಂಚ-ಪಂಚ**–(ಪಂಚ-ಪಂಚ ಎಂಬ ಪದಗಳಿಗೆ $5 \times 5 = 25$ ಅನಿರುದ್ಧ-ಅನಿರುದ್ಧ, ಅನಿರುದ್ಧ-ಪ್ರದ್ಯುಮ್ನ ಇತ್ಯಾದಿ ತೈತ್ತಿರೀಯೋಪನಿಷದೂಕ್ತ ಇಪ್ಪತ್ತೈದು ರೂಪಗಳೆಂದೂ ಅರ್ಥ ಇದೆ.) ಹತ್ತು ಭಗವದ್ರೂಪಗಳನ್ನು ತಿಳಿಯಬೇಕು ಎಂದು ತಾತ್ಪರ್ಯ. ಪಂಚ ಋತುಗಳಲ್ಲಿ ಅನಿರುದ್ಧಾದಿ ನಾರಾಯಣಾಂತ ಐದು ರೂಪಗಳು, ಪಂಚಾಗ್ನಿಗಳಲ್ಲಿ ಅದೇ ಅನಿರುದ್ಧಾದಿ ನಾರಾಯಣಾಂತ ಭಗವದ್ರೂಪಗಳು ಐದು, ಅಂತೂ ಹತ್ತು ಭಗವ-ದ್ರೂಪಗಳು ಅಂತ ಅರ್ಥ. ಭಾರತೀರಮಣಮುಖ್ಯಪ್ರಾಣಾಂತರ್ಗತ ಅನಿರುದ್ಧಾದಿ ಐದು ರೂಪಗಳು ಎಂದು ತಿಳಿಯಬೇಕು. ಭೋಜನಪದಾರ್ಥಗಳ ಅಂತರ್ಗತ ಪಂಚ ರೂಪಗಳನ್ನು ಪಂಚಾಗ್ನಿ ಅಂತರ್ಗತ ಭಗವದ್ರೂಪಗಳಿಗೆ ಅರ್ಪಿಸಬೇಕು. ಕಾಲ-ಸಾಂಕೇತವಾದ ಆಯುಸ್ಸನ್ನು ಋತುಗಳಂತರ್ಗತ ಭಗವಂತಗೆ ಅರ್ಪಿಸಬೇಕು, **ಪಂಚ ಸುಸಂಸ್ಕಾರ—ಪಂಚ**–ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ, ಅಂತಃಕರಣ ಎಂಬ ಐದು ವೃತ್ತಿಗಳೆಂದರ್ಥ. ಈ ಐದರಲ್ಲಿಯೂ ಪೂರ್ವೋಕ್ತ ದಿಕ್ಪ್ರದರ್ಶನ ರೀತ್ಯಾ ಅನಿರುದ್ಧಾದಿ ಐದು ಭಗವದ್ರೂಪಗಳ ತಿಳಿದು ಐದು ವೃತ್ತಿಗಳಿಂದ ಜನಿತ-ವಾದ, ಅನ್ಯರಿಗೆ ಅಪ್ರತ್ಯಕ್ಷವಾದ ವ್ಯಾಪಾರಗಳ ಆಯಾ ವೃತ್ತಿ ಅಂತರ್ಗತ ಭಗವ-ದ್ರೂಪಗಳಿಗೆ ಅರ್ಪಿಸಬೇಕು. **ಸುಸಂಸ್ಕಾರಾಂಚಿತನಾಗಿ**–'ಪಂಚ' ಎಂಬುದರನ್ನ ಆವರ್ತನ ಮಾಡಿಕೋಬೇಕು. ಲೋಕದಲ್ಲಿ ಉಪನಯನಾದಿ ಸಂಸ್ಕಾರ ಎಂದು

ಪ್ರಯೋಗವಿದೆ. ಇಲ್ಲಿ ಸಂಸ್ಕಾರ ಶಬ್ದದಿಂದ 'ಜನ್ಮನಾ ಜಾಯತೇ ಶೂದ್ರಃ' ಎಂಬ ಶೂದ್ರತ್ವ ಉಪನಯನ ಸಂಸ್ಕಾರದಿಂದ ಪರಿಹಾರವಾಗಿ ಬ್ರಾಹ್ಮಣತ್ವ ಪ್ರಾಪ್ತಿ ಹೇಗೋ ತದ್ವತ್ ಪಂಚಸಂಸ್ಕಾರ, ಪಂಚ ಮನೋವೃತ್ತಿಗಳು ಐಹಿಕ ಸಂಬಂಧ-ವಾದ ವಿಷಯಾಸಕ್ತಿವುಳ್ಳವನಾಗಿ, ಅಹಂಮಮತಾದಿಂದ ಸಹಿತನಾಗಿ ಪರಮಾತ್ಮನ ವಿಸ್ಮೃತಿಯಿಂದ ಯುಕ್ತನಾಗಿ ದುಷ್ಟಸಂಸ್ಕಾರದಿಂದ ಯುಕ್ತವಾಗದೆ, ಅವನ್ನು ಬಿಟ್ಟು ಸಮೀಚೀನ ಸಂಸ್ಕಾರ ಎಂಬುದು ಅಹಂಮಮತಾದಿಗಳನ್ನು ತ್ಯಜಿಸಿ ವಿಷಯ ಆಶಾ ದೂರ ಮಾಡಿ ನಿಸ್ಸಂಗನಾಗಿ. ಜ್ಞಾನ ಭಕ್ತಿ ವೈರಾಗ್ಯಗಳನ್ನು ಸಂಪಾದಿಸುವುದೇ ಈ ಮನೋವೃತ್ತಿಗಳ ಐದಕ್ಕೆ ಸುಸಂಸ್ಕಾರವು. **ಅಂಚಿತನಾಗಿ**–ಇಂಥಾ ಸಂಸ್ಕಾರವನ್ನು ಅನುಭವಕ್ಕೆ ತಂದುಕೊಂಡು. **ದ್ವಿಪಂಚಕರಣದಲಿ** – ಮನೋವ್ಯತಿರಿಕ್ತವಾದ ಹತ್ತು ಇಂದ್ರಿಯಗಳಲ್ಲಿ ಅನಿರುದ್ಧಾದಿ ಐದು ರೂಪಗಳನ್ನು ಎರಡೂ ಪಂಚಕಗಳಲ್ಲಿ ತಿಳಿಯಬೇಕು. **ಪಂಚಕನರಿವುದೆ**–ಮನೋವೃತ್ತಿಗಳ ದ್ವಾರಾ ದಶೇಂದ್ರಿಯಜನಿತ ಕರ್ಮಗಳು ಆಯಾ ಇಂದ್ರಿಯಾಂತರ್ಗತ ಐದು ಭಗವದ್ರೂಪಗಳರಿತು ಅರ್ಪಿಸೋವ-ನಾಗಬೇಕೆಂದರ್ಥ. ಇದರಿಂದ ಆ ಯು ಸ್ಸು ಸಾರ್ಥಕವಾಗತದೆ. ಭೋ ಜ ನ ಮಾಡುವದೂ ಸಾರ್ಥಕವಾಗುವುದು. ಏಕಾದಶೇಂದ್ರಿಯಗಳ ವ್ಯಾ ಪಾ ರ ವೂ ಸಾರ್ಥಕವು. ಈ ಪ್ರಕಾರ ಅನುಸಂಧಾನ ಮಾಡತಾ ಅನುಭವಕ್ಕೆ ತಂದು ಬದುಕಿ-ರೋದೇ ಫಲ ಯೆಂತ ತಾತ್ಪರ್ಯ.

**ಸೂಚನೆ** :— ಮೇಲೆ ಹೇಳಿದ ಸಮಾನಧರ್ಮವುಳ್ಳ ಎರಡು ಋತು-ಗಳೆಂದರೆ ಹೇಮಂತ ಮತ್ತು ಶರದ್ ಋತುಗಳು. ಈ ವಿವಕ್ಷೆಯಿಂದ ಪಂಚ ಋತು-ಗಳೆಂದದ್ದು.

(ಗು.) (i) **ಪಂಚಋತುಗಳ** ವಿಧಾನ ಎಂದರೆ ಜೀವನು ಐದು ವಿಧ ಸ್ಥಳ-ಗಳಿಂದ ಭಿನ್ನಿಸಿ (ಎಂದರೆ ಹೊರಗೆ ಬಂದು) ಸೃಷ್ಟನಾಗೋಣವೇ (ಹುಟ್ಟೋಣವೇ) ಪಂಚಋತುಗಳೆನಿಸತವೆ. ಅವು ದಾವುವೆಂದರೆ :– ೧. ಅಂಬರ, ೨. ವಾರಿದ, ೩. ಭೂ, ೪. ಪಿತೃ. ೫. ಜನನೀ. ತದ್ವಿವರ ೧. ಮೊ ಟ್ಟ ಮೊ ದ ಲು ನಾರಾಯಣನ ಅಧೀನನಾಗಿ ಆಕಾಶದಲ್ಲಿರತಾನೆ. ೨. ಅನಂತರ ನಾರಾಯಣನ ಆಜ್ಞೆ-ಯಿಂದ ಗಗನದಿಂದ ಭಿನ್ನಿಸಿ ಮೇಘಮಂಡಲದಲ್ಲಿ ಪ್ರವೇಶಿಸಿ ಮಾ ಯಾ ಪ ತಿ ವಾಸುದೇವನ ಅಧೀನದಲ್ಲಿರತಾನೆ. ೩. ತರುವಾಯ ವಾಸುದೇವನ ಆಜ್ಞೆಯಿಂದ ಮೇಘಮಂಡಲದಿಂದ ಭಿನ್ನಿಸಿ ವಾರಿ (ಮಳೆನೀರು) ಮಾರ್ಗದಿಂದ ಭೂಮಿಗೆ ಬಂದು ಧಾನ್ಯದಲ್ಲಿ ಪ್ರ ವಿ ಷ್ಟ ನಾ ಗಿ ಜಯಾಪತಿ ಸಂಕರುಷಣನ ಅಧೀನದಲ್ಲಿರತಾನೆ. ೪. ಆಮ್ಯಾಲೆ ಸಂಕರ್ಷಣನ ಆಜ್ಞೆಯಿಂದ ಧಾನ್ಯದಿಂದ ಭಿನ್ನವಾಗಿ ಪುರುಷನ ಗರ್ಭ ಪ್ರವೇಶಿಸಿ ಕೃತಿಪತಿ ಪ್ರದ್ಯುಮ್ನನ ಅಧೀನದಲ್ಲಿರತಾನೆ. ೫. ಅನಂತರ ಪ್ರದ್ಯುಮ್ನನ

ಆಜ್ಞೆಯಿಂದ ಪಿತೃಗರ್ಭದಿಂದ ಭಿನ್ನನಾಗಿ ರೇತಸ್ಸಿನ ಮೂಲಕ ಜನನೀ ಗರ್ಭಕ್ಕೆ ಬಂದು ಶಾಂತಾಪತಿ ಅನಿರುದ್ಧನ ವಶದಲ್ಲಿದ್ದು ನವಮಾಸಗಳು ಬೆಳೆಯುತಾನೆ. ನವಮಾಸ ತುಂಬಿದ ಮೇಲೆ ಅನಿರುದ್ಧನ ಆಜ್ಞೆಯಿಂದ ಮಾತೃಗರ್ಭದಿಂದ ಭಿನ್ನಿಸಿ ಶಿಶುವಾಗಿ ಹುಟ್ಟುತಾನೆ. (ಈ ವಿಚಾರಗಳೆಲ್ಲ ಸೂತ್ರಭಾಷ್ಯದ ಮೂರನೆ ಅಧ್ಯಾಯದ ಪ್ರಥಮ ಪಾದದ ಕಡೆಯ ಐದು (೧೬-೨೦) ಅಧಿಕರಣಗಳಲ್ಲಿ ನಿರೂಪಿತವಾಗಿವೆ.) ಈ ಪ್ರಕಾರ ಜೀವನ ಐದು ವಿಧ ಸ್ಥಳಾಂತರವನ್ನು ಭಗವಂತನ ಪಂಚರೂಪಗಳಿಂದ ಪ್ರೇರಿತನಾಗಿ ಹೊಂದೋಣವೇ ಪಂಚಋತುಗಳೆಂದು ಜ್ಞಾನಿಗಳು ಹೇಳತಾರೆ. ಅಂಬರ, ವಾರಿದ, ಭೂ, ಪಿತೃ, ಜನನೀ ಈ ಐದೇ ಪಂಚಾಗ್ನಿಗಳು. ಇವುಗಳಲ್ಲಿ ಆಯಾ ಭಗವದ್ರೂಪಗಳ ಅಧೀನನಾಗಿದ್ದು ತತ್ಪ್ರೇರಣೆಯಿಂದ ಭಿನ್ನಿಸೋಣವೇ ಪಂಚ-ಯಜ್ಞಗಳೆಂದು ತಿಳಿಯಬೇಕು. ಈ ಪ್ರಕಾರ ಪಂಚಋತುಗಳ, ಪಂಚಾಗ್ನಿಗಳ ಮತ್ತು ಐದು ಯಜ್ಞಗಳ ವಿಧಾನ ಜ್ಞಾನಿಗಳಿಂದ ತಿಳಕೊಂಡು ನಾರಾಯಣಗೆ ಸಮರ್ಪಿಸಿದರೆ ಶ್ರೀಹರಿ ಪ್ರೀತನಾಗತಾನೆ.

(ii) **ಪಂಚಪಂಚರೂಪವ ತಿಳಿದು** ಎಂಬ ಇಪ್ಪತ್ತೈದು ರೂಪಗಳಿಗೆ ವಿವರ:– ಮೂಲರೂಪಿ ನಾರಾಯಣ ಮತ್ತು ಕೇಶವಾದಿ ರೂ ಪ ಗ ಳು. ಈ ವಿಧಾನ ಸಂಪ್ರದಾಯಪೂರ್ವಕ ಶ್ರೀಹರಿಕಥಾಮೃತಸಾರ (ಸಂಧಿ ಆರು) ಪಂಚಮಹಾಯಜ್ಞ ಸಂಧಿಯಲ್ಲಿ ಶ್ರೀಜಗನ್ನಾಥದಾಸರು ವಿಸ್ತರಿಸಿದ್ದಾರೆ.

(iii) ಪಂಚಸಂಸ್ಕಾರಂಚಿತನಾಗಿ ಎಂಬಲ್ಲಿ—೧. ತಪ್ತಮುದ್ರ, ೨. ಶಂಖಚಕ್ರಾದಿ-ಮುದ್ರಾಧಾರಣ, ೩. ಊರ್ಧ್ವಪುಂಡ್ರ, ೪. ದ್ವಾದಶನಾಮ, ೫. ಹರಿಸ್ಮರಣ-ರೂಪ ಯಜ್ಞ ಅಥವಾ ತಪಸ್ಸು. ಇದಕ್ಕೆ ಪ್ರಮಾಣ "ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ನಾಮಸ್ತಥೋತ್ತರಃ । ಅಮೀ ಹಿ ಪಂಚಸಂಸ್ಕಾರಾಃ ಕೃಷ್ಣವತ್ವ ಪ್ರಸಾದಕಾಃ ॥"

(iv) ದ್ವಿಪಂಚಕರಣದಲಿ – ದಶಇಂದ್ರಿಯಗಳಲ್ಲಿ ಹೇಗೆಂದರೆ ಶ್ರವಣ, ತ್ವಕ್, ನಯನ, ರಸನ, ಘ್ರಾಣ ಈ ಐದು ಜ್ಞಾನೇಂದ್ರಿಯಗಳು. ವಾಕ್, ಪಾಣಿ, ಪಾದ, ಪಾಯು (ಗುದ), ಉಪಸ್ಥ ಈ ಐದು ಕರ್ಮೇಂದ್ರಿಯಗಳು. ಈ ದಶೇಂದ್ರಿಯ-ಗಳಲ್ಲಿ 'ಪಂಚಕನರಿವುದೇ'–ಅನಿರುದ್ಧಾದಿ ಪಂಚರೂಪಗಳನ್ನು ದಶೇಂದ್ರಿಯಗಳಲ್ಲಿ ಮತ್ಸ್ಯಾದಿದಶಾವತಾರಗಳನ್ನು ಶ್ರೀಗುರುಗಳ ಅನುಗ್ರಹದಿಂದ ತಿಳಿದು ಭಕ್ತಿಪುರಸ್ಸರ ಭಜಿಪುದೇ ಫಲವಿದು ಬಾಳ್ದುದಕೆ.

(ಟೀ.) ೧. ಹೇಮಂತ ಮತ್ತು ಶಿಶಿರಋತುಗಳನ್ನು ಒಂದಾಗಿ ಭಾವಿಸಿ ಋತು-ಗಳನ್ನು ಐದೆಂದು ಹೇಳುವುದುಂಟು. ೨. ಆಹವನೀಯ, ಗಾರ್ಹಪತ್ಯ, ಅನ್ವಾ-ಹಾರ್ಯ ಅಥವಾ ದಕ್ಷಿಣ, ಸವ್ಯ, ಅಪಸವ್ಯ ಎಂಬುವು ಗೃಹಸ್ಥನಿಂದ ಸೇವ್ಯವಾದ

ಪಂಚಾಗ್ನಿಗಳು. ಆಕಾಶಾದಿ ಪಂಚಾಗ್ನಿಗಳಲ್ಲಿ ನಾರಾಯಣಾದಿ ಪಂಚ ಭಗವದ್ರೂಪ-ಗಳನ್ನು ಚಿಂತಿಸುವ ಕ್ರಮವು ಛಾಂದೋಗ್ಯಭಾಷ್ಯದಲ್ಲಿ ನಿರೂಪಿತವಾಗಿದೆ. ಹರಿ-ಕಥಾಮೃತಸಾರದಲ್ಲಿ ಪಂಚಮಹಾಯಜ್ಞ ಸಂಧಿಯಲ್ಲಿ ಆಕಾಶ, ಮೇಘ, ಭೂಮಿ, ತಂದೆ, ತಾಯಿ ಎಂಬುವೇ ಪಂಚಾಗ್ನಿಗಳೆಂದು ವಿಸ್ತಾರವಾಗಿ ಪ್ರಸಕ್ತವಾಗಿವೆ. ೩. ಬ್ರಹ್ಮಯಜ್ಞ, ಅಧ್ಯಾಪನ, ವೈಶ್ವದೇವ, ಪಿತೃತರ್ಪಣ, ಬಲಿಹರಣಗಳೇ ಗೃಹಸ್ಥನು ಅವಶ್ಯಮಾಡಬೇಕಾದ ಪಂಚಸಂಸ್ಕಾರಗಳು.

**ಹೃದಯೆಂದಿ ರೂಪವು ವದನದಿ ನಾಮವು ।**
**ಉದರದಿ ನೈವೇದ್ಯವು ಶಿರದಿ ॥**
**ಪದಜಲ ನಿರ್ಮಾಲ್ಯವನೆ ಧರಿಸುತ ಕೋ ।**
**ವಿದರ ಸದನ ಹೆಗ್ಗದವ ಕಾಯ್ಯುವುದೆ (ಕಾಯ್ವುದಿದೆ) ॥೭॥**

(ಅವತಾರಿಕೆ) ಈ ದೇಹವನ್ನು ಪರಮಾತ್ಮನ ರಥವೆಂದು ಅನುಸಂಧಾನ ಮಾಡಿ ರಥಕ್ಕೆ ಮಧ್ಯಭಾಗವಾದ ದೇವರ ಆವಾಸಕ್ಕೆ ಯೋಗ್ಯವಾದ ಹೃದಯಾಕಾಶಗತ ಅಷ್ಟದಳ ಕಮಲವೆಂದು ಚಿಂತನಮಾಡಿ ಇಂಥಾ ಹೃದಯಗತ ಕಮಲದಲ್ಲಿ ಬಿಂಬ-ರೂಪಿ ಪರಮಾತ್ಮನನ್ನ ಚಿಂತಿಸಬೇಕು, ಮತ್ತು ದೇಹಕ್ಕೆ ಮಾಡುವ ಅಲಂಕಾರ ಆಚಾರ ಉಪಚಾರಗಳೆಲ್ಲವೂ ಭಗವದುಪಚಾರವೆಂತ ಅನುಸಂಧಾನ ಮಾಡಬೇಕು. ಇದರಿಂದ ದೇಹಕ್ಕೆ ಸಾರ್ಥಕ್ಯ ಬಂತು. ಜಡಪ್ರತಿಮೆ ಸದೃಶ ಚೇತನಪ್ರತಿಮೆ, ಜಡಪ್ರತಿಮಾ ಪೂಜಾದಿಗಳಲ್ಲಿ ಅಂತರ್ಗತ ವಿವಕ್ಷಾದಂತೆ ಚೇತನಪ್ರತಿಮಾದಲ್ಲಿಯೂ ಇದೆಯೆಂಬ ಅನುಸಂಧಾನ ಮಾಡಬೇಕು. ಇದರಿಂದ ದೇಹ ಸಾರ್ಥಕ್ಯವಾಗತದೆ ಅಂತ ತಾತ್ಪರ್ಯ.

**ವದನದಿ ನಾಮವು**–ವದನದಿಂದ ನುಡಿಯತಕ್ಕ ಮಾತುಗಳು ಯಾವತ್ತೂ ಮಾತೃಕಾಮಂತ್ರದ ರೀತ್ಯಾ ಸರ್ವವೂ ಭಗವನ್ನಾಮೋಚ್ಚಾರಣೆಗಳೆಂದು ಅನು-ಸಂಧಾನವಿರಬೇಕು. **ಉದರದಿ ನೈವೇದ್ಯವು** – ಮುಖದ್ವಾರದಿಂದ ಉದರದಲ್ಲಿ ಸೇರತಕ್ಕ ಭೋಜನದ್ರವ್ಯಾದಿಗಳು ಯಾವತ್ತೂ ಹೃದಯಾಕಾಶಾಂತರ್ಗತ ಬಿಂಬರೂಪಗೆ ನಿವೇದನೆಯಂತಾ ಅನುಸಂಧಾನವಿರಬೇಕು. **ಪದಜಲ** – ಸ್ನಾನ ಮಾಡತಕ್ಕ ಉದಕದಲ್ಲಿ ಭಾಗೀರಥೀ ಅನುಸಂಧಾನಮಾಡಿ ಸ್ನಾನ ಮಾಡಬೇಕು. ಆ ಸ್ನಾನ ಎಂಬುದು ಜಲಪ್ರತಿಮಾಂತರ್ಗತ ಹೃದಯಾಕಾಶ ಹರಿಗೆ ಭಾಗೀರಥೀ ಅಭಿಷೇಕ ಎಂದು ಅನುಸಂಧಾನ ಮಾಡಬೇಕು. **ಶಿರದಿ ನಿರ್ಮಾಲ್ಯವನೆ ಧರಿಸುತ**–ವಸ್ತ್ರಾದಿ-ಗಳೇನು ಹಾಗೆ ಪುಷ್ಪಾದಿಗಳೇನು, ಶಿರದಲಿ, ಗಳದಲಿ (ಕಂಠದಲ್ಲಿ) ಧರಿಸೋಣ-ದಾವದದೆ ಇದೇ ದೇಹಾಂತರ್ಗತ ಭಗವಂತಗೆ ಅಭಿಷೇಕ ಪೂಜಾದಿಗಳು ನಿವೇದನಗಳೆಂತ ಅನುಸಂಧಾನಯುಕ್ತ ಮಾಡಿದ್ದರೆ ದೇಹ ಸಾರ್ಥಕ್ಯವಾದೀತು. (**ನಿರ್ಮಾಲ್ಯ**–

ಪೂರ್ವೋಕ್ತಗಳು ಪೃಥವಂತಃ ಭಗವದರ್ಪಿತ ಕಾಲದಲ್ಲಿ ನಿರ್ಮಾಲ್ಯವಲ್ಲ. ಕಿಂತು ಅರ್ಪಿತ ಯೆಂತ ಅನುಸಂಧಾನ ಮಾಡಿದ ನಂತರ ನಿರ್ಮಾಲ್ಯ ಅಂತ ಕರೆಸತದೆ. ನಿರ್ಮಾಲ್ಯ ಶಬ್ದಕ್ಕೆ ಭಗವಂತಗೆ ಅರ್ಪಿತವಾದ ದ್ರವ್ಯಗಳು ಅಂತ ತಾತ್ಪರ್ಯ. ಅದು ತನ್ನ ದೇಹವಲ್ಲಿ ಇದ್ದೇ ಇರತದೆ, ನಿರ್ಮಾಲ್ಯ ಧರಿಸಿದವನೇ ಆದ. ಆದ್ದರಿಂದ ಇಂಥಾ ನಿರ್ಮಾಲ್ಯ ಧರಿಸಿ.) **ಕೋವಿದರ** – ಜ್ಞಾನಿಗಳ, ತತ್ವಾಭಿಮಾನಿಗಳೆಂದು ತಾತ್ಪರ್ಯ. ಇಂಥಾ ತತ್ವಾಭಿಮಾನಿಗಳ, **ಸದನದ** – ಮನೆ ಸಾಂಕೇತವಾದ ಇಂದ್ರಿಯಗಳು, ಆಯಾ ಇಂದ್ರಿಯಗಳೇ ಮನೆಯಾಗಿ ಮಾಡಿಕೊಂಡು ಅಲ್ಲಿ ದೇವತೆ-ಗಳು ವಾಸವಾಗಿದ್ದಾರೆ. ಇಂಥಾವರ ಮನೆ ಬಾಗಿಲುಗಳನ್ನು, **ಕಾಯ್ದುವುದೆ**–ಅಂದರೆ ಸರ್ವದಾ ಮನೋವೃತ್ತಿಗಳ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಇಟ್ಟು ಆಯಾ ಇಂದ್ರಿಯಗಳು ದುರ್ವಿಷಯಗಳಲ್ಲಿ ಹೋಗದಂತೆ ಮಾಡಬೇಕೆಂತ ಪ್ರಾರ್ಥಿಸುವುದೆ, **ಹೆಗ್ಗದ**–ದೊಡ್ಡಬಾಗಿಲು ದಶೇಂದ್ರಿಯಗಳಿಗೆ ಶ್ರೇಷ್ಠವಾದದ್ದು ಮನೋಇಂದ್ರಿಯ. ಈ ಮನಾಖ್ಯ ಇಂದ್ರಿಯವೇ ರುದ್ರದೇವರ ಸದನ. ಸರ್ವೇಂದ್ರಿಯಕ್ಕೆ ಶ್ರೇಷ್ಠ ಮನಸ್ಸು. ಸರ್ವೇಂದ್ರಿಯಾಭಿಮಾನಿಗಳಕಿಂತಲೂ ರುದ್ರದೇವರು ಶ್ರೇಷ್ಠರು. ಇಂಥ ಶ್ರೇಷ್ಠ ರುದ್ರದೇವರ ಮನೆಬಾಗಿಲು ಕಾಯ್ದು, ಮನಸ್ಸೇನು, ಮನೋವೃತ್ತಿಗಳೇನು ದುರ್ವಿಷಯದಲ್ಲಿ ಪ್ರವೃತ್ತಿ ಮಾಡಿಸದಂತೆ ಮಾಡಬೇಕೆಂದು ರುದ್ರದೇವರ ಮನೆ-ಬಾಗಿಲು ಕಾಯ್ದು ಅವರನ್ನು ಸದಾ ಪ್ರಾರ್ಥಿಸುತ್ತಿರಬೇಕು. ಈ ಪ್ರಕಾರ 'ಕೋವಿದರ ಹೆಗ್ಗದ'ವನ್ನು ಕಾಯೋಣ ದಾವದದೆ ಅದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು.) ಮನಸ್ಸಿನಿಂದ ಸದಾ ಭಗವಂತನ ರೂಪ ಧ್ಯಾನ ಮಾಡಬೇಕು. ಮುಖ-ದಿಂದ ಅವನ ಮಂಗಳಕರವಾದ ನಾಮಂಗಳ ಕೊಂಡಾಡಬೇಕು. ಉದರದಿ ಶ್ರೀಹರಿಗೆ ಸಮರ್ಪಿಸಿದ ನೈವೇದ್ಯ (ಹರಿಪ್ರಸಾದ) "ಕವಳೇ ಕವಳೇ ಯಸ್ಯ ಗೋವಿಂದ ನಾಮ-ಕೀರ್ತನಮ್" ಎಂಬೋ ಪ್ರಮಾಣಾನುಸಾರ ಸ್ವೀಕರಿಸಬೇಕು. ಶಿರದಿ ಹರಿಗೆ ಸಮರ್ಪಿಸಿದ ತೀರ್ಥವನ್ನೂ ತುಲಸೀಪುಷ್ಪಾದಿಗಳನ್ನೂ ಧರಿಸಿಕೊಂಡು ಹರಿ ಸರ್ವೋತ್ತಮ ತಾರತಮ್ಯ ಪಂಚಭೇದ ಜ್ಞಾನವುಳ್ಳಂಥ ಜ್ಞಾನಿಗಳ ಮನಿ ತಲ-ಬಾಗಿಲು ಕಾಯ್ವುದು ಸಫಲ. ಜ್ಞಾನಿಗಳ ಸದನ ವೈಕುಂಠವೆನಿಸತದೆ. ಅದರ ಮಹಾದ್ವಾರದಲ್ಲಿ ಆವಾಸವಾಗಿಪ್ಪುದೇ ಫಲವಿದು ಬಾಳ್ದುದಕೆ. ಈ ನುಡಿಗೆ ಪ್ರಮಾಣ ಕೃಷ್ಣಾಮೃತಮಹಾರ್ಣವದ ಈ ಶ್ಲೋಕ "ಹೃದಿ ರೂಪಂ ಮುಖೇ ನಾಮಂ ನೈವೇದ್ಯಮುದರೇ ಹರೇಃ । ಪಾದೋದಕಂ ಚ ನಿರ್ಮಾಲ್ಯಂ ಮಸ್ತಕೇ ಯಸ್ಯ ಸೋಽಚ್ಯುತಃ ॥ "

ಕೋವಿದರ–ಪಂಡಿತರ, ಜ್ಞಾನಿಗಳ, ಸದನದ–ಮನೆ, ಹೆಗ್ಗದ (ಹಿರಿಯ ಕದ)–ಹೆಬ್ಬಾಗಿಲು ಅಥವಾ ಹೊರಬಾಗಿಲು (ಗೇಟ್).

(ಭೀ.) ಶ್ವಾನವು (ನಾಯಿಯು) ಯಜಮಾನನ ಮನೆಬಾಗಿಲನ್ನು ಕಾಯ್ದು ಸೇವಿಸುವಂತೆ ಜ್ಞಾನಿಗಳ ಮನೆಬಾಗಿಲನ್ನು ದಾಸನಂತೆ ಸೇವಿಸುತ್ತಾ ಅವರ ಅನುಗ್ರಹವನ್ನು ಸಂಪಾದಿಸಬೇಕೆಂದು ಭಾವ.

**ಪಾತ್ರರ ಸಂಗಡ ಯಾತ್ರೆಯು (ಯಾತ್ರಿ) ಚರಿಸುತ ವಿ ।**
**ಧಾತೃಪಿತನ ಗುಣ ಸ್ತೋತ್ರಗಳಾ ॥**
**ಶ್ರೋತ್ರದಿ ಸವಿದು ವಿಚಿತ್ರಾನಂದದಿ ।**
**ಗಾತ್ರವ ಮರೆದು(ನಲಿದು) ಪಾರತ್ರಿಕ(ಪರತ್ರವ) ಪಡೆವುದೆ ॥೮॥**

**ಪಾತ್ರರ** – ದೇಹಗತರಾದ ಚತುರ್ವಿಂಶತಿ ತತ್ವಾಭಿಮಾನಿ ದೇವತೆಗಳು, ಅವರ, **ಸಂಗಡ**–ಈ ಬ್ರಹ್ಮಾದಿ ದೇವತೆಗಳು ದೇಹಧಾರಿಯಾದ ಜೀವನ ಸಂಗಡಲೇ ಇರತಕ್ಕವರು. ಇಂಥಾ ಪಾತ್ರರ ಕೂಡಿಕೊಂಡವನಾಗಿ ಅಧಿಕಾರಿ ಇದ್ದಾನೆ. **ಯಾತ್ರೆಯು** – ಗಮನಾಗಮನಾದಿ ಕ್ರಿಯಾರೂಪವಾದ ಯಾತ್ರೆಯು, ಇಂಥಾ ಪಾತ್ರರ ಸಂಗಡ (ಸಂಗದಿಂದ) ಯುಕ್ತನಾಗಿ ಗಮನಾದಿಗಳನ್ನ ಮಾಡತೇನೆಂತ ಅನುಸಂಧಾನ ಮಾಡೋಣದರಿಂದ ಸರ್ವದಾ ಸತ್ಸಂಗತ್ಯದಿಂದಲೇ ಇದ್ದವನಾಗತಾನೆ. ಇಂಥಾ ಯಾತ್ರೆಯು, **ಚರಿಸುತ**–ಆಚರಣೆಮಾಡತಾ ಮತ್ತು ಹಾಗೆ ಅನುಸಂಧಾನ ಮಾಡತಾ, **ವಿಧಾತೃ** – ಬ್ರಹ್ಮ, **ಪಿತನ** – ಬ್ರಹ್ಮನ ತಂದೆಯಾದ ವಾಸುದೇವ, ಸಾಂಕೇತದಿಂದ ಸರ್ವತ್ರ ವ್ಯಾಪ್ತನೆಂತ ತಾತ್ಪರ್ಯ. ಅವನ **ಗುಣ** – ತ್ರಿಗುಣಕಾರ್ಯಗಳೆಂಬ ಬಿಂಬಕ್ರಿಯಾ ಗುಣಗಳ ಅನುಸಂಧಾನ ಮಾಡತಾ, **ಸ್ತೋತ್ರಗಳಾ**–ಚರಾಚರಾಂತರ್ಗತನಾಗಿ ಮಾಡತಕ್ಕ ಅವನ ವ್ಯಾಪಾರಗಳೇನು. ಅವತಾರಗಳಿಂದ ಮಾಡತಕ್ಕ ವ್ಯಾಪಾರಗಳಿಂದೇನು, ವೇದಶಾಸ್ತ್ರಗಳಲ್ಲಿ ಹೇಳಿದಂಥದರಿಂದೇನು, ಆ ವಾಸುದೇವನ ಸ್ತೋತ್ರಗಳನ್ನು ಉಚ್ಚರಿಸತ, **ಶ್ರೋತ್ರದಿ ಸವಿದು**–ಗರ್ಗರಾದಿ ಅನೇಕ ಶಬ್ದಗಳ, ಪಕ್ಷ್ಯಾದಿ ಶಬ್ದಗಳ ಕಿವಿಯಿಂದ ಕೇಳಿ ತಿಳಿದವನಾಗಿ ತದಂತರ್ಗತನಾದ ತಚ್ಛಬ್ದವಾಚ್ಯನಾದ ಪರಮಾತ್ಮಾಖ್ಯ ಶಬ್ದವನ್ನ ಅಧಿಷ್ಠಾನ ಶಬ್ದದ್ವಾರಾ ಸವಿದವನಾಗಿ, **ವಿಚಿತ್ರಾನಂದದಿ**–ಇಂಥಾ ಅನುಸಂಧಾನದಿಂದ ಉತ್ಪನ್ನವಾಗತಕ್ಕ ವಿಚಿತ್ರವಾದ ಪರಮಾತ್ಮನ ಧ್ಯಾನದ ಆನಂದದಿಂದ, **ಗಾತ್ರವ ಮರೆದು**–ಅಹಂಮಮತಾ ಎಂಬ ದೇಹಾಭಿಮಾನವನ್ನ ಮರೆತವನಾಗಿ, **ಪಾರತ್ರಿಕ**–ಉತ್ತಮವಾದ, ಜ್ಞಾನಭಕ್ತಿವೈರಾಗ್ಯಗಳನ್ನು. **ಪಡೆವುದೆ**–ಹೊಂದೋಣವೇ ಬದುಕ್ಕಿದ್ದಕ್ಕೆ ಫಲ. *

---

* ೭ ಮತ್ತು ೮ನೇ ನುಡಿಗಳನ್ನು ಆಧ್ಯಾತ್ಮ ವಿವಕ್ಷಣೆಯಿಂದ ವ್ಯಾಖ್ಯಾನ ಮಾಡಿದಂತಿದೆ. ಇತರ ವ್ಯಾಖ್ಯಾನಗಳಲ್ಲಿ ಆದಿಭೌತಿಕ ದೃಷ್ಟಿಯಿಂದ ಮೇಲಿನ ಪದ್ಯಗಳ ಅರ್ಥ ಹೇಳಲಾಗಿದೆ. ಮೇಲ್ನೋಟಕ್ಕೆ ಈ ಎರಡು ನುಡಿಗಳು ಭಾಗವತೋಕ್ತ 'ಷಡಂಗ ಸೇವ' ಯನ್ನು ವರ್ಣಿಸಿದಂತೆ ಇದೆ.

(ಗು.) ಪಾತ್ರರ–ಶ್ರೀಹರಿಗುರುಗಳವರ ಅನುಗ್ರಹಕ್ಕೆ ಪಾತ್ರರಾದ ಜ್ಞಾನಿಗಳಾದ ಭಗವದ್ಭಕ್ತರ ಸೇವೆ ಮಾಡುತಾ, **ಯಾತ್ರಿ ಚರಿಸುತ** – ವೇಂಕಟಾಚಲ, ಪಂಢರಪುರ, ಉಡುಪಿ, ಕಾಶಿ ಮೊದಲಾದ ಕ್ಷೇತ್ರಗಳ ಯಾತ್ರಾ, ಗಂಗಾದಿ ಸಮಸ್ತ ತೀರ್ಥಗಳ ಸ್ನಾನದಗೋಸುಗ ಸಂಚಾರ ಮಾಡುತಾ (ಇದರಿಂದಲೂ ವಿಶೇಷ ಸಾಧನವುಳ್ಳ ಮುಖ್ಯ ಯಾತ್ರಾ ಶ್ರೀಹರಿಯು ಪರಮಾನುಗ್ರಹಕ್ಕೆ ಪಾತ್ರರಾದ ಚತುರ್ವಿಂಶತಿ ತತ್ವಗಳಿಗೆ ನಿಯಾಮಕರಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳ ಸಂಗಡದಿಂದ ಅಧೀನನಾಗಿ ಯಾತ್ರಿ ಚರಿಸಿ ಎಂದರೆ ಅಸೃಜ್ಯರಾಶಿಯಿಂದ ಸೃಷ್ಟಿಗೆ ಬಂದು ಶರೀರ ಯಾತ್ರಾರೂಪವಾದ ಯಾತ್ರಾ ಮಾಡುತಾ, ಸಾಧನಾನಂತರ ಮುಕ್ತನಾಗಿ ಪರಲೋಕ [ವೈಕುಂಠ]ವೈದುವದೇ ಮಹಯಾತ್ರ) ಪಾರತ್ರಿಕ ಪಡೆವುದು ಸ್ವರೂಪಸುಖವುಳ್ಳವನಾಗಿ ಆನಂದೋದ್ರೇಕದಿಂದ, ವಿಧಾತೃಪಿತನ, ನಾರಾಯಣನ, ಗುಣಸ್ತೋತ್ರಗಳ ಪರಮಮಂಗಳಕರವಾದ ಗುಣಗಳನ್ನ ಸ್ತೋತ್ರಗಳನ್ನ, **ಶ್ರೋತ್ರದಿ ಸವಿದು**– ಜ್ಞಾನಿಗಳ ಮುಖದಿಂದ ಹರಿಕಥಾಮೃತಸಾರವನ್ನ ಪಾನಮಾಡಿ, ವಿಚಿತ್ರಾನಂದದಿ ಪರಮಾನಂದವುಳ್ಳವನಾಗಿ, **ಗಾತ್ರವ ನಲಿದು** – ಶರೀರದಿಂದ ಲೋಲ್ಯಾಡುತ ನರ್ತನ ಮಾಡುತ, **ಪಾರತ್ರಿಕ ಪಡೆವುದೆ** – ಪರತತ್ವನಾದ ಶ್ರೀನಾರಾಯಣನ ಅನುಗ್ರಹ ಸಂಪಾದಿಸಿ ಪರಲೋಕದಲ್ಲಿ ಸ್ವರೂಪಜ್ಞಾನಾನಂದಾವಿರ್ಭಾವ ಉಳ್ಳವನಾಗಿ ಉಚ್ಚ ಸುಖಪಡೆವುದೇ ಫಲವಿದು ಬಾಳ್ದುದಕೆ. ಇದಕ್ಕೆ ಪ್ರಮಾಣ ಶ್ಲೋಕ– "ಸಂಸಾರ ಯಾತ್ರಾಮನುವರ್ತಮಾನಃ ತ್ವದಾಜ್ಞಯಾ ನೃಹರೇऽನ್ನರಾತ್ಮನೇ । ಜಾನಾಮಿ ಧರ್ಮಾನ್ ನ ಚ ಮೇ ನಿವೃತ್ತಿಃ ಕೃಷ್ಣೇನ ದೇವೇನ ಹೃದಿಸ್ಥಿತೇನ॥ ಯಥಾ ನಿಯುಕ್ತೋऽಸ್ಮಿ ತಥಾ ಹನಾಮಿ ॥"

ಪಾತ್ರರು – ಸತ್ಪಾತ್ರರು, ಯೋಗ್ಯರು. ವಿಧಾತೃ – ಬ್ರಹ್ಮ. ಸ್ತೋಮ– ಸಮೂಹ, ಗುಂಪು. ಶ್ರೋತ್ರದಿ–ಕಿವಿಯಲ್ಲಿ. ಗಾತ್ರವ–ದೇಹವನ್ನು. ಪರತ್ರ– ಪರಲೋಕ, ಸದ್ಗತಿ.

(ಭೀ.) "ಸತಾಂ ಪ್ರಸಂಗಾನ್ಮಮ ವೀರ ಸಂಪದೋ ಭವಂತಿ ಹೃತ್ಕರ್ಣ– ರಸಾಯನಾಃ ಕಥಾಃ " ಎಂಬ ಭಾಗವತವಾಕ್ಯದಂತೆ ಸಜ್ಜನರ ಸ ಹ ವಾ ಸ ದಿಂ ದ ಭಗವತ್ಕಥಾಮೃತವನ್ನು ಕೇಳುವ (ಕಿವಿಯಿಂದ ಕುಡಿಯುವ) ಸೌಭಾಗ್ಯ ದೊರಕುತ್ತದೆ. ಅದನ್ನು ಕೇಳುತ್ತ ಕೇಳುತ್ತ ಮೈಮರೆತು ಹೋಗುವುದೆಂದು ಭಾವ.

**ಹಂಸ ಮೊದಲು ಹದಿನೆಂಟು ರೂಪಗಳ ।**
**ಸಂಸ್ಥಾನವ ತಿಳಿದನುದಿನದಿ ॥**
**ಸಂಸೇವಿಸುವ ಮಹಾ ಪುರುಷರ (ಮಹಿಮರ) ಪದ ।**
**ಪಾಂಸುವ ಧರಿಸಿ ಅಸಂಶಯ ನಪ್ಪುದೆ (ನಾಹುದೆ) ॥೯॥**

ಮುಂದೆ ಬರುವ ಹಂಸಃ-ಶುಚಿಸದ್ ಮೊದಲಾದ ಪದಗಳೆಲ್ಲ ನಾವು ಮಾಧ್ಯಾಹ್ನಿಕದಲ್ಲಿ ಹೇಳುವ "ಹಂಸಃ ಶುಚಿಸದ್.. ...." ಎಂಬ ಋಜ್ಮಂತ್ರದಲ್ಲಿ ( ಋಗ್ವೇದಸಂಹಿತೆ ೪/೪೦/೫ ; ತೈ.ಸಂ-೧/೮/೧೫/೧೮ ಮತ್ತು ೪/೨/೧/೧೬ ) ಉಕ್ತವಾಗಿವೆ ; ಋಗ್ವೇದಪಾಠದಲ್ಲಿ ಕಡೆಯ 'ಬೃಹತ್' ಎಂಬ ನಾಮವಿಲ್ಲ. ಕಠೋಪನಿಷದ್ಭಾಷ್ಯದಲ್ಲಿ (೨ ಅಧ್ಯಾ, ೨ ವಲ್ಲಿ, ೨ ಮಂತ್ರ) ಈ ಮಂತ್ರಕ್ಕೆ ವ್ಯಾಖ್ಯಾನರೂಪವಾದ ಕೂರ್ಮಪುರಾಣ ವಚನವನ್ನು ಉದಹರಿಸಿದ್ದಾರೆ. ಹರಿಕಥಾಮೃತಸಾರದ ಟೀಕೆಯಲ್ಲೂ ೨೨ನೆಯ ಸಂಧಿಯ ಕೊನೆಯಲ್ಲಿ ಕೊಟ್ಟಿದ್ದಾರೆ.

೧. **ಹಂಸ** ಶಬ್ದ ನಿರ್ವಚನ:—

೧. "ಹಂತಿ ತಮ ಇತಿ ಹಂಸಃ" "ಹನ್ ಹಿಂಸಾಗತ್ಯೋಃ ಯೇ ಗತ್ಯರ್ಥಕಾಃ ತೇ ಜ್ಞಾನಾರ್ಥಕಾಃ ತಮಃ ಪರಿಹಾರಕಃ ।" ತಮಸ್ಸನ್ನು ಪರಿಹಾರ ಮಾಡತಕ್ಕವನು ಹಂಸಃ ಎಂದರ್ಥ. ತಮಸ್ಸು-ಕತ್ತಲೆ. ಅದನ್ನು ಪರಿಹಾರಮಾಡತಕ್ಕವನು ಸೂರ್ಯ. ಸೂರ್ಯಾಂತರ್ಗತನಾಗಿ ಹಂಸರೂಪಿ ಪರಮಾತ್ಮ ಇದ್ದುಕೊಂಡು ಅಂಧಕಾರ ಪರಿಹಾರ ಮಾಡತಾನೆ. ಆದ್ದರಿಂದ ಹಂಸರೂಪನಿಗೆ ಸೂರ್ಯಾಂತರ್ಗತ ಸಂಸ್ಥಾನವು.

೨. "ಶ್ವಾಸಮಿವಾವಾಸಃ ಜ್ಞಾನಸ್ವರೂಪ ಇತಿ ಚ । ಹಂಸಶಬ್ದೇನ ಶ್ವಾಸ-ಜ್ಞಾನಾದಯೋ ಲಕ್ಷ್ಯಂತೇ ।" 'ಹಂ' ಶಬ್ದದಿಂದ ಶ್ವಾಸ ಜ್ಞಾನ ಎರಡೂ ಭಾವನಾ ಮಾಡಬೇಕು. ಜ್ಞಾನಾಧಿಷ್ಠಾನದಲ್ಲಿದ್ದುಕೊಂಡು ಅಜ್ಞಾನ ಪರಿಹಾರ ಮಾಡುವವ-ನಾದಕಡಿಯಿಂದ ಜ್ಞಾನಾಧಿಷ್ಠಿತನಾದ ಪರಮಾತ್ಮಗೆ 'ಹಂಸ' ಎಂತ ಹೆಸರು.

೩. ಶ್ವಾಸಾಧಿಷ್ಠಾನಃ । ಗಮನಾಗಮನ ರೂಪವಾದ ಶ್ವಾಸಕ್ಕೆ 'ಹಂಸ' ಎಂತ ಹೆಸರು, ಶ್ವಾಸಾಂತರ್ಗತನಾದವಗೆ ಹಂಸವೆಂದು ನಾಮ.

೪. ವಿರಜಾಂತರ್ಗತಃ ಅರ್ಕಾದಿಭ್ಯೋ ಅಚ್ ಪ್ರತ್ಯಯಃ ತನ್ನಿಯಾಮಕತ್ವಮ್

ಅಥವಾ

೫ "ಸಂಸಾರ ಬಂಧಂ ಹಂತೀತಿ ಹಂಸಃ" । ಲಕ್ಷ್ಮ್ಯಾತ್ಮಕ ವಿರಜಾಂತರ್ಗತ-ನಾಗಿ ಲಿಂಗಭಂಗಮಾಡಿಸತಾನಾದ್ದರಿಂದ 'ಹಂಸ' ವೆಂದು ಹೆಸರು.

೬. "ಪೃಷೋದರಾದಿತ್ವಾತ್ ಸಾಧುತ್ವಮ್ । ಸರ್ವಶರೀರೇಷು ಹಂತಿ ಗಚ್ಛತಿ ಇತಿ ಹಂಸಃ"

೭. "ಅಹೇಯತ್ವಾತ್ ಹಂಸಃ" ಹೇಯಭೂತವಾದ ಪಂಚಭೂತ ಶರೀರ-ದಿಂದ ರಹಿತನಾದವನಾದ್ದರಿಂದ 'ಹಂಸ'. ಅಹೇಯ ಶರೀರದಿಂದ ಯುಕ್ತನಾದ್ದರಿಂದ

ಹೇಯ ಶರೀರಾದಿಗಳಲ್ಲಿದ್ದುಕೊಂಡು ಜೀವನ್ನ ಆ ದೇಹದಿಂದ ಬಿಡಿಸಿ ತನ್ನ ಸಹಿತ ದೇಹಾಂತರ ಪ್ರವೇಶ ಮಾಡತಾನಾದ್ದರಿಂದಲೂ 'ಹಂಸಃ' ಎಂದು ನಾಮ.

**೨. ಶುಚಿಷತ್**—೧. ಶುಚಿತ್ವಾತ್ ಶುಚಿಃ । ೨. ಶೋಚತಿ ಶುದ್ಧ್ಯತೀತಿ ಶುಚಿಃ । ೩. ಶುಚೌ ತಿಷ್ಠತೀತಿ ಶುಚಿಃ । ೪. ಕಲಿಂ ಶೋಚಯತೀತಿ ವಾ ಶುಚಃ । ೫. ನಿರಂಜನತಯಾ ಶುಚಿಃ ॥ ಕಲಿಯ ಆವೇಶದಿಂದ ದೂರವಾದವರು ವಾಯುದೇವರು. ಆದ್ದರಿಂದ ವಾಯುದೇವರಿಗೆ 'ಶುಚಿ' ಎಂತ ನಾಮ. ಪಾರತಂತ್ರ್ಯಾದಿ ದೋಷರಹಿತನಾದವ ಪರಮಾತ್ಮನಾದ್ದರಿಂದ, ಪರಮಾತ್ಮಗೆ 'ಶುಚಿ' ಎಂತ ನಾಮವು. "ಶುಚಿನಾಮಕೋ ವಾಯುಃ ತಸ್ಮಿನ್ ತಿಷ್ಠತೀತಿ ಶುಚಿಷತ್, ಶುದ್ಧಸತ್ವಾಶ್ರಯಃ ಇತಿ ಭಾವಃ । ಶುಚಿನಾಮಕ ವಾಯ್ವಂತರ್ಗತನಾದ ಪರಮಾತ್ಮಗೆ 'ಶುಚಿಷತ್ ಎಂತ ಹೆಸರು.

**೩. ವಸುಃ** ।—೧. ವಸುಸ್ಥಿತಃ । ಪಿತೃದೇವತೆಗಳಾದ ವಸುದೇವತೆಗಳ ಅಂತರ್ಗತನಾದ್ದರಿಂದ ವಸು ಎಂತ ನಾಮ. ೨. ವಸಂತಿ ಸರ್ವಭೂತಾನಿ ಅತ್ರ ತೇಷು ಅಯಮಪಿ ವಸತೀತಿ ವಸುಃ । ಪೃಥ್ವಿ ಆದಿ ಪಂಚಮಹಾಭೂತಗಳಲ್ಲಿ ಆವಾಸವಾದ್ದರಿಂದ ವಸುಃ. ೩. ವಸುನಾಮಕ ಅಗ್ನಿಅಂತರ್ಗತನಾದ್ದರಿಂದ ವಸುಃ. 'ವಸೂನಾಂ ಅಸ್ಮಿ ಪಾವಕಃ' (ಗೀತೆ) ಇತ್ಯುಕ್ತ್ಯಾವಸುಃ ೪. ವಸು ಎಂದರೆ ಧನಾದಿಗಳಿಗೆ ಹೆಸರು ಜ್ಞಾನಧನ, ಅಧಿಕ ರತ್ನಾದಿ ಧನಗಳ ತದಂತರ್ಗತನಾದ್ದರಿಂದ ವಸುಃ. ೫. ಚರಾಚರ ಸರ್ವತ್ರ ವ್ಯಾಪ್ತನಾದ್ದರಿಂದ ಪರಮಾತ್ಮಗೆ ವಸು ಎಂತ ಹೆಸರು.

**೪. ಅಂತರಿಕ್ಷಸತ್**—೧. ಅಂತರಿಕ್ಷಃ—ಆಕಾಶ, ಅವ್ಯಾಕೃತಾಕಾಶ. ಲಕ್ಷ್ಮ್ಯಾತ್ಮಕ. ಇದರಲ್ಲಿ ಆವಾಸವಾಗಿ ಇರೋಣದರಿಂದ ಭಗವಂತಗೆ 'ಅಂತರಿಕ್ಷ' ಎಂದು ಹೆಸರು. ೨. "ಅಂತಃ ಈಕ್ಷ್ಯತೇ ಜಗದಸ್ಮಿನ್ ಇತಿ ಅಂತರಿಕ್ಷಃ । ತಸ್ಮಿನ್ ತಿಷ್ಠತೀತಿ ಅಂತರಿಕ್ಷಸತ್ ।" ಪ್ರಳಯ ಕಾಲದಲ್ಲಿ ತನ್ನೊಳಗೆ ಸರ್ವ ಪ್ರಾಣಿಗಳನ್ನು ಧರಿಸಿ ಸೃಷ್ಟಿಕಾಲಕ್ಕೆ ಅವರನ್ನು ಸೃಷ್ಟಿಮಾಡೋ ಉದ್ದಿಶ್ಯ ಈಕ್ಷಣ ಮಾಡತಾನಾದ್ದರಿಂದ ಅಂತರಿಕ್ಷ ಎಂದು ನಾಮ. ಪರಮಾತ್ಮ ತನ್ನ ನಾಭಿಗತ ಆಕಾಶದಲ್ಲಿ ಪ್ರಳಯ ಕಾಲದಲ್ಲಿ ಚರಾಚರಗಳ ಧರಿಸಿ ಇರೋಣದರಿಂದಲೂ ಅಂತರಿಕ್ಷಸತ್ ಎಂತ ಕರೆಸಿದನು. ೩. ಸರ್ವಪ್ರಾಣಿಗಳ ಚಿತ್—ಹೃದಯಾಕಾಶದಲ್ಲಿ ಬಿಂಬನಾಗಿ ಇರೋಣದರಿಂದ 'ಅಂತರಿಕ್ಷಸತ್' ಎಂತ ನಾಮ. ಅಂತರಿಕ್ಷಸತ್—ಅಂತರಿಕ್ಷಗಃ.

**೫. ಹೋತಾ**—೧. ಯಜ್ಞಕ್ಕೆ ಯೋಗ್ಯವಾದ ಅಧಿಷ್ಠಾನ. ೨. ಜುಹೋತೀತಿ ಹೋತಾ—ಯಜ್ಞಮಾಡುವುದಕ್ಕೆ ಯೋಗ್ಯವಾದ ಅಗ್ನಿ ಅಂತರ್ಗತನಾಗಿ ಯಜ್ಞದಲ್ಲಿ ಹಾಕತಕ್ಕ ಆಹುತಿಗಳ ಸ್ವೀಕರಿಸುವನಾದ್ದರಿಂದ 'ಹೋತಾ' ಎಂತ ಕರೆಸಿಕೊಳತಾನೆ.

೩. 'ಹು ದಾನಾದನಯೋಃ' ಯಜ್ಞಾದಿಗಳಲ್ಲಿ ಹಾಕತಕ್ಕ ಆಹುತಿಗಳನ್ನ ಅಗ್ನಿ ಅಂತರ್ಗತನಾಗಿದ್ದು ಅಗ್ನಿದ್ವಾರಾ ದೇವತಾಭಾಗ ದೇವತೆಗಳಿಗೆ ಕೊಡತಾ. ತನ್ನ ಭಾಗವನ್ನ ತಾನು ಭೋಜನ ಮಾಡತಾನಾದ್ದರಿಂದ 'ಹೋತಾ' ಮತ್ತು ೪. 'ಜುಹೋತಿ ಶಬ್ದಾದಿ ವಿಷಯಾನಿತಿ।' ದೇಹೇಂದ್ರಿಯಾದಿಗಳಲ್ಲಿದ್ದು ಶಬ್ದಾದಿ ವಿಷಯಗಳನ್ನು ಸ್ವೀಕರಿಸಿ ದೇಹಾಧಿಷ್ಠಿತನಾಗಿ ದೇಹೇಂದ್ರಿಯಾದಿಗಳಲ್ಲಿದ್ದ° ಜೀವೇಂದ್ರಿಯಗಳಿಗೆ ಭೋಗಕ್ಕೆ ಕೊಡತಾನಾದ್ದರಿಂದ 'ಹೋತಾ' ಎಂದು ನಾಮ.

೬. **ವೇದಿಷತ್**–ಯಜ್ಞ ಮಾಡುವುದಕ್ಕೆ ಯೋಗ್ಯವಾದ ಭೋರ್ಜಗಲಿಯಲ್ಲಿರುವ ಪರಮಾತ್ಮಗೆ 'ವೇದಿ' ಎಂತ ಹೆಸರು. "ವೇದ್ಯಾಂ ತಿಷ್ಠತೀತಿ ವೇದಿಷತ್‌ದಃ" ವೇದಿ ಯೆಂದರೆ ವಿಧ್ಯುಕ್ತವಾದ ಪೂಜಾದಿಗಳನ್ನ ಪಡೆಯುವ ಯಜ್ಞ ಭೋರ್ಜಗಲಿಯಲ್ಲಿ ಸರ್ವದಾ ಸನ್ನಿಹಿತನಾಗಿ ಯಜ್ಞಾದಿ ಸತ್ಕ್ರಿಯಗಳನ್ನು ಸಂರಕ್ಷಣೆಮಾಡಿ ತದುಚಿತ ಫಲಗಳನ್ನು ಕೊಡುವವನು ವೇದಿಷನ್ನಾಮಕನು.

೭. **ಅತಿಥಿ**–೧. ಅತಿ-ಅತಿಶಯಿತಂ ಧಂ-ಅನ್ನಂ ಅಸ್ಯೇತಿ ಅತಿಧಿಃ। ಪರಮಾತ್ಮನು ಅತಿಶಯವಾದ ಅನ್ನವನ್ನು ಭೋಜನ ಮಾಡುವವನಾದ್ದರಿಂದ ಅತಿಥಿ ಎಂದು ನಾಮ. ೨. ಅತಿಶಯವಾದ ಅನ್ನವೆಂದರೆ ಚರಾಚರ ಜಗತ್ತು. 'ಅತ್ತಿ ಚರಾಚರಮಿತಿ ವಾ ಅತಿಥಿಃ' ೩. ಅಥವಾ 'ಅತೀತಿ ಸತತಂ ಗಚ್ಛತೀತಿ ಅತಿಥಿಃ' ೪. ಅತಿಥಿರೂಪತಯಾ ಅತಿಥಿಃ। ಪ್ರಳಯಕಾಲದಲ್ಲಿ ಚರಾಚರ ಜಗತ್ತನ್ನು ಭೋಜನ ಸಾಂಕೇತದಿಂದ ಉದರ-ದಲ್ಲಿ ಇಡುವನಾದ್ದರಿಂದ 'ಅತಿಥಿ' ನಾಮಕನು. ಆಗಂತುಕನಾಗಿ ಮಧ್ಯಾಹ್ನಕಾಲಕ್ಕೆ ಕ್ಷುಧಾತುರನಾಗಿ ಅಶನಾರ್ಥಿಯಾಗಿ ಬಂದ ಬ್ರಾಹ್ಮಣನು ಅತಿಥಿಯು, ಅವನಂತರ್ಗತ-ನಾಗಿರುವ ಪರಮಾತ್ಮ 'ಅತಿಥಿ' ಎಂತ ಕರೆಸತಾನೆ. ತ್ರಿಕಾಲದಲ್ಲಿಯೂ ಇರತಕ್ಕವ-ನಾದ್ದರಿಂದಲೂ, ಅತಿಥಿರೂಪನಾಗಿ ಸನ್ಮಾನ ಹೊಂದುವವನಾದ್ದರಿಂದಲೂ 'ಅತಿಥಿ' ಎನಿಸತಾನೆ.

೮. **ದ್ರೋಣಸತ್** – (ಸೋಮರಸ ಪಾತ್ರೆ ಅಧಿಷ್ಠಾನ) ದ್ರೋಣ–ಕಲಶ, 'ಸೋಮರಸ ಪಾತ್ರೇ ತಿಷ್ಠತೀತಿ ಸಃ ದ್ರೋಣಸತ್'. ಅಮೃತವೆಂಬೋ ಸೋಮ-ರಸ ಪಾತ್ರೆಯಲ್ಲಿ ವಾಸಮಾಡತಕ್ಕ ಪರಮಾತ್ಮನು 'ದ್ರೋಣ' ನಾಮಕನು.

೯. **ನೃಷತ್**–"ನೃಷು ಮನುಷ್ಯೇಷು ತಿಷ್ಠತೀತಿ ನೃಷತ್" ಎಂತ ಹೆಸರು. "ನೃಷು ಮನುಷ್ಯೇಷು ಪರಮ ಕಾರುಣಿಕತಯಾ" (ಮನುಷ್ಯರ ಸ್ಥೂಲದೇಹ ಅಧಿಷ್ಠಾನ). "ರಾಮಾದ್ಯವತಾರಂ ಗೃಹೀತ್ವಾ ತೇಷು ತಿಷ್ಠತೀತಿ ನೃಷತ್". ಮನುಷ್ಯರೋಪಾದಿ-ಯಲ್ಲಿ ಅವತಾರ ಪ್ರದರ್ಶನ ಮಾಡಿ ಮನುಷ್ಯರ ಮಧ್ಯದಲ್ಲಿ ಮನುಷ್ಯರಂತೆ ಆಚರಿಸಿ-ದವನು ನೃಷತ್.

**೧೦. ವರಸತ್** – ೧. "ವರೇಷು ಬ್ರಹ್ಮಾದಿಷು ತಿಷ್ಠತೀತಿ ಸಃ ವರಸತ್" ಎಂದು ನಾಮ. ಉತ್ತಮರಾದ ಬ್ರಹ್ಮಾದಿಗಳ ಅಧಿಷ್ಠಾನಗತನಾದ ಪ್ರಯುಕ್ತ 'ವರಸತ್' ಎಂತ ನಾಮವು. ೨. "ವರೇಷು ಬ್ರಹ್ಮರುದ್ರಾದಿಷು ತಿಷ್ಠನ್ ತತ್ಕಾರ್ಯನಿರ್ವಾಹಂ ಕೃತವಾನ್ ವರಸತ್" (ಬ್ರಹ್ಮರುದ್ರಾದಿ ದೇವತಾಧಿಷ್ಠಾನ).

**೧೧. ಋತಸತ್**–"ಋತೇ ಯಥಾರ್ಥರೂಪೇ ವೇದೇ ತಿಷ್ಠತೀತಿ ಸಃ ಋತಸತ್" ಅನಾದ್ಯನಂತಕಾಲಕ್ಕೂ ನಾಶವಾಗದೇ ಯಥಾರ್ಥವಾಗಿ ಇರತಕ್ಕ ವೇದಾಂತರ್ಗತನಾದ ಪರಮಾತ್ಮನು ಋತಸತ್. (ವೇದಾಧಿಷ್ಠಾನ ಯಥಾರ್ಥ ವಾಕ್ಯ ಅಧಿಷ್ಠಾನ).

**೧೨. ವ್ಯೋಮಸತ್**–"ಪ್ರಕೃತಿಸ್ಥ ವ್ಯೋಮಃ ತಸ್ಯ ಜಗದಿತಿ ಜಗದಾಧಾರಭೂತಶ್ರೀಃ ವ್ಯೋಮ ತಸ್ಯಾಂ ತಿಷ್ಠತೀತಿ ಸಃ ವ್ಯೋಮಸತ್ । ಲಕ್ಷ್ಮ್ಯಂತರ್ಗತ ರೂಪಃ ವಿಶ್ವಂ ಜಯತಿ ಸಂರಕ್ಷತೀತಿ ವ್ಯೋಮ ವ್ಯಯಿ ಸಂವರಣೇ ಪ್ರಕೃತಿಃ ತಸ್ಯಾಂ ತಿಷ್ಠತೀತಿ ವ್ಯೋಮಸತ್" । ಸಕಲ ಚರಾಚರವನ್ನು ಸುತ್ತಿಕೊಂಡಿರುವ ಮೂಲ ಜಡಪ್ರಕೃತಿಗೆ ಅಭಿಮಾನಿಯಾಗಿ ತದಂತರ್ಗತದಲ್ಲಿದ್ದು 'ಪ್ರಕೃತಿ' ಎಂದು ಕರೆಸತಕ್ಕ ವ್ಯೋಮಶಬ್ದವಾಚ್ಯಳಾದ ಪ್ರಕೃತಿ ಎಂಬ ಶ್ರೀದೇವೇರಲ್ಲಿ ಅಂತರ್ಗತನಾಗಿದ್ದು ನಿಯಾಮಕನಾದವನು. ಆದ್ದರಿಂದ ವ್ಯೋಮಸತ್ ನಾಮಕನು. (ಲಕ್ಷ್ಮೀ ಅಧಿಷ್ಠಾನ)

**೧೩. ಅಬ್ಜಃ**–ಜಲಚರಾಃ...... ತನ್ನಿಯಾಮಕಃ । (ಜಲಚರ ಅಧಿಷ್ಠಾನನು).

**೧೪. ಗೋಜಾಃ**–ಗೋವುಗತನಾದ ಪರಮಾತ್ಮಗೆ ಗೋಜಾ; ಗೋವುಗಳ ಸ್ಥೂಲ ದೇಹಗತನಾದ ಪರಮಾತ್ಮನು 'ಗೋಜಾ' ಎಂತ ಹೆಸರಿನಿಂದ ತಿಳಿಯಲ್ಪಡತಾನೆ. ಗೋ ಎಂದರೆ ಭೂಮಿ, ಗೋವು–ಸ್ವರ್ಗ ಜಲ, ಇವುಗಳಲ್ಲಿ ಜ–ಹುಟ್ಟಿದವರಿಗೆಲ್ಲರಿಗೂ ನಿಯಾಮಕನು. (ಗೋ ಅಧಿಷ್ಠಾನ)

**೧೫. ಋತಜಾ**–ಋತಜಾರುಗತೌ ಇತಿ ಧಾತೋಃ ಭಗವಂತಂ ಇತಿ ಶೇಷೋಕ್ತಿಃ, ಮುಕ್ತಗಃ ಶುದ್ಧ ಸತ್ವಾತ್ಮಕ ದೇಹಾಂತರ್ಗತನಾದವಗೆ 'ಋತಜಾ' ಎಂತ ಹೆಸರು. 'ಋತಾಜ್ಜಾತಾ ಋತಜಾಃ' ಸತ್ಯವನ್ನು ನಂಬದವರು ಸತ್ಯದ್ದೇಶೆಯಿಂದ ಹುಟ್ಟಿದವರು ಎಂದರೆ ಲಿಂಗಭಂಗರಾದ ಮುಕ್ತರು. ಅವರ ನಿಯಾಮಕನು (ಮುಕ್ತರ ದೇಹ ಅಧಿಷ್ಠಾನ)

**೧೬. ಅದ್ರಿಜಾ**—"ಅದ್ರಿಷು – ಪರ್ವತೇಷು ತಿಷ್ಠತೀತಿ ಸಃ ಅದ್ರಿಜಾ – ಪರ್ವತ ಸಂಸ್ಥಾನ್ ಅಧಿಷ್ಠಿತ ಪರ್ವತಜ" ಚೇತನ ಅಚೇತನಾಧಿಷ್ಠಾನನು. ಪರ್ವತಗಳಲ್ಲೇನು, ಅಲ್ಲಿ ಜನಿಸಿದ ಸ್ಥಾವರ ಜಂಗಮ ಜೀವರಲ್ಲೇನು, ಇವರಲ್ಲಿರತಕ್ಕ ಪರಮಾತ್ಮಗೆ 'ಅದ್ರಿಜಾ' ಎಂತ ನಾಮ. (ಪರ್ವತಗಳು, ಅಲ್ಲಿ ಜನಿಸಿದ ವಸ್ತುಗಳ ಅಧಿಷ್ಠಾನ)

**೧೭. ಋತಂ** – ಮುಖ್ಯತಃ ವೇದಪ್ರತಿಪಾದ್ಯನು, ವೇದ್ಯನು, ವೇದಾರ್ಥಗಳಲ್ಲಿ ಅಂತರ್ಗತನಾಗಿ ಸತ್ಯವಾದ ಸರ್ವೋತ್ತಮನೆಂದು ವೇದಾರ್ಥಗಳಿಂದ ಕರೆಸತಕ್ಕವನು. 'ಋತಂ' ಎಂಬುವವನು ಸತ್ಯನು, ನಿತ್ಯನು, ಸನಾತನನು (ವೇದಗಳ ಅಧಿಷ್ಠಾನ).

**೧೮. ಬೃಹತ್**–ಪೂರ್ಣಗುಣನು, ಬ್ರಹ್ಮ ಶಬ್ದವಾಚ್ಯನು. ಬೃಹತ್ತಾದ (ದೊಡ್ಡ-ದಾದ) 'ನವಾವರಣ' ಸಹಿತವಾದ ಬ್ರಹ್ಮಾಂಡಾಂತರ್ಗತನಾದವನು. ಆದ್ದರಿಂದ ಬೃಹತ್ ಎಂತ ನಾಮ (ಬ್ರಹ್ಮಾಂಡ ಅಧಿಷ್ಠಾನ).

ಹೀಗೆ ಹಂಸ ಮೊದಲುಮಾಡಿ ಬೃಹತ್ ಎಂಬೋವರಿಗೂ ಹದಿನೆಂಟು (೧೮) ಸಂಖ್ಯಾದಿಂದ ಯುಕ್ತವಾದ ಭಗವದ್ರೂಪಗಳು ಅವುಗಳಿಗಿರುವ 'ಸಂಸ್ಥಾನ' ಅಧಿಷ್ಠಾನಗಳನ್ನು ಛಂದಾಗಿ ತಿಳಿದುಕೊಂಡು ತಾವು, **ಅನುದಿನದಿ**–ಪ್ರತಿದಿನವೂ ಆ ಭಗವದ್ರೂಪಗಳ ಸೇವಾ ಮಾಡತಾ ಅದೇ ಪ್ರಕಾರ, **ಮಹಾಮಹಿಮರ**–ಶ್ರೇಷ್ಠ-ರಾದ ಮಹಿಮೋಪೇತರಾದ ಭಗವದ್ಭಕ್ತರ, **ಪಾದಪಾಂಸುವ** – ಪಾದಧೂಳಿ-ಯನ್ನು ತಮ್ಮ ಸರ್ವಾಂಗದಲಿ, **ಧರಿಸಿ, ಅಸಂಶಯುನಪ್ಪುದೆ** – ಸಂಶಯರಹಿತ-ನಾಗುವದೇ (ಸಾಧಕರಿಗೆ) ಬದುಕಿರುವುದಕ್ಕೆ ಫಲ ಎಂತ ತಾತ್ಪರ್ಯ. ಮೇಲೆ ಹೇಳಿದ ಹದಿನೆಂಟು (೧೮) ಹಂಸರೂಪಗಳು, ಅದಕ್ಕೆ ಸ್ಥಾನ, ಸ್ಥಾನಾಂತರ್ಗತ ಹಂಸಾದಿ ರೂಪಗಳು ಭಜಿಸಲ್ಪಡಬೇಕೆಂಬುದೇ ತಾತ್ಪರ್ಯ. ಹೇಗೆ ಭಜಿಸಬೇಕೆಂದರೆ ತಾವು ಇದ್ದಲ್ಲೇ ಪೂರ್ವೋಕ್ತ ಸ್ಥಾನಗಳನ್ನು ಮನಸಾ ಸಮಸ್ತ ವಾಸನಾದಿಂದಲೂ, ಪ್ರತ್ಯಕ್ಷ ಕಂಡ ವಾಸನಾದಿಂದಲೂ ಸ್ಮರಿಸುವವರಾಗಿ ಅದೇ ಪ್ರಕಾರ ಅವುಗಳ ಅಂತರ್ಗತ ಹಂಸಾದಿರೂಪಗಳನ್ನು ವಾಸನಾದಿಂದ ಸ್ಮರಿಸಿ ಆ ಯಾವತ್ತೂ ರೂಪ-ಗಳಿಗೆ ಹೃದಯಾಕಾಶದಲ್ಲಿಯ ವಾಸನಾ ಪ್ರತಿಮೆಯಲ್ಲಿ ಐಕ್ಯ ಚಿಂತಿಸತಾ ಅದರಲ್ಲಿ ಎಲ್ಲ ರೂಪಗಳೂ ಚಿದಾನಂದದಿಂದ ಭಾರತೀರಮಣಮುಖ್ಯಪ್ರಾಣಾಂತರ್ಗತನಾಗಿದೆ ಅಂತ ಸಂಭಾವಿಸಿ, ಪೂಜಿಸಿ ಪುನಶ್ಚ ಆಯಾ ರೂಪಗಳ ಪೂರ್ವೋಕ್ತ ಹದಿನೆಂಟು ಸ್ಥಾನಗಳಲ್ಲಿ ಐಕ್ಯಚಿಂತನೆ ಎಂದರೆ ದೀಪದಲ್ಲಿ ದೀಪ ಮುಟ್ಟಿಸಿದರೆ (ಹಚ್ಚಿದರೆ) ಎರಡು ದೀಪಗಳು ಹ್ಯಾಂಗೋ ತದ್ವತ್ ಅಂಶ-ಅಂಶ ರೂಪಗಳನ್ನು ಅನುಸಂಧಾನ-ದಿಂದ ತಿಳಿದು ಹೃದಯಗತ ಬಿಂಬನಲ್ಲಿ ಐಕ್ಯಚಿಂತನೆ ಮಾಡಿ ಪೂಜಾದಿಗಳ ಮಾಡಿ ಪುನಶ್ಚ ಆಯಾ ಅಂಶಗಳನ್ನು ಅಲ್ಲಲ್ಲಿ ಐಕ್ಯಚಿಂತನೆ ಮಾಡೋಣವೇ ಪೂಜೆಯಂತ ತಿಳಿಯಬೇಕು. ಮಹಾಮಹಿಮರು ಪರಮಾತ್ಮನನ್ನು ನಿರಾಶಾದಿಂದ ಭಜಿಸುವವರು. 'ನಿರಾಶಾ' ಎಂದರೆ ಸಕಲ ವಿಷಯಗಳಲ್ಲಿ ಓಡಾಡತಾ ಇರೋಣ ಮತ್ತು ಸಂತೋಷ–ಕಷ್ಟದಲ್ಲಿ ದುಃಖ ಎರಡೂ ಇಲ್ಲದೇ ಇರೋಣವೇ ನಿರಾಶೆಯು. ಇಂಥವರ ಪಾದರೇಣುವನ್ನು ಸರ್ವಾಂಗದಲ್ಲಿ ಧರಿಸಿ ಅವರ ಸೇವಾದಿಗಳ ಮಾಡೋಣ, ತಾರತಮ್ಯ ಪಂಚಭೇದ ಜ್ಞಾನದಲ್ಲಿ ಸಂಶಯವಿಲ್ಲದಿರೋಣವೇ ಬದುಕ್ಕಿದ್ದಕ್ಕೆ ಫಲ.

ಅಶಾತ್ಯಾಗ 'ದ್ವಂದ್ವ ಸಹನ'. ಅಧಿಕಾರಿಗಳು ಇದನ್ನು ಆಲೋಚನಾರೂಪ ತಪಸ್ಸಿನಿಂದ ನಿಗ್ರಹ ಮಾಡುತಾ ಇರಬೇಕೆಂಬುದೇ ತಾತ್ಪರ್ಯ.

(ಗು.) ಹಂಸ ಮೊದಲು ಹದಿನೆಂಟು ರೂಪಗಳು ಯಾವುವೆಂದರೆ—"ಹಂಸಃ ಶುಚಿಸದ್... ಬೃಹತ್" ಎಂಬೋ ಹದಿನೆಂಟು ರೂಪಗಳ ಸಂಸ್ಥಾನವ ತಿಳಿದು—ದೇಹಾಂತರ್ಗತ ಇವ್ವಂಥ ಸ್ಥಾನಗಳ ತಿಳಿದು, ಅವು ಹದಿನೆಂಟು ಸ್ಥಾನಗಳಲ್ಲಿ ವ್ಯಾಪ್ತವಾಗಿರುವ ವಿಸ್ತಾರ :

೧. ಜೀವಾಂತರ್ಗತ "ಹಂಸ"ರೂಪಿ ಪರಮಾತ್ಮ. ೧

೨. ಷೋಡಶಕಲಾ ಲಿಂಗದೇಹದಲ್ಲಿ ಸತ್ವಪರಿಚ್ಛೇದದಲ್ಲಿ ಮನಸ್ಸು ಮತ್ತು ಪಂಚಜ್ಞಾನೇಂದ್ರಿಯಗಳಲ್ಲಿ ಶುಚಿಸತ್ ಆರಂಭಿಸಿ ಅತಿಥಿವರೆಗಿನ ಆರುರೂಪಗಳು. ೬

೩. ರಜಃಪರಿಚ್ಛೇದದಲ್ಲಿ ಪಂಚ ಕರ್ಮೇಂದ್ರಿಯಗಳಲ್ಲಿ ದ್ರೋಣಸತ್ ಆರಂಭಿಸಿ ವ್ಯೋಮಸತ್ ಐದು ರೂಪಗಳು. ೫

೪. ತಮಃ ಪರಿಚ್ಛೇದದಲ್ಲಿ ಪಂಚತನ್ಮಾತ್ರಗಳಲ್ಲಿ ಅಬ್ಜಾದಿಂದ ಆರಂಭಿಸಿ ಋತವರೆಗಿನ ಐದು ರೂಪಗಳು. ೫

೫. ಶಿರಸ್ಸಿನ ಮೇಲೆ ದ್ವಾದಶಾಂಗುಲಿ ಬಿಟ್ಟು ದ್ವಾದಶಕಮಲದಲ್ಲಿ ೧೮ನೇ ಬೃಹನ್ನಾಮಕ ಪರಮಾತ್ಮ. ೧

ಈ ಪ್ರಕಾರ ಹಂಸ ಮೊದಲು ಹದಿನೆಂಟು ರೂಪಗಳ ಸಂಸ್ಥಾನವ ತಿಳಿದು **ಅನುದಿನ**—ಪ್ರತಿದಿನಗಳಲ್ಲಿ, **ಸಂಸೇವಿಸುವ** – ಸಮ್ಯಕ್-ಸಮೀಚೀನವಾದ ಭಕ್ತಿಪುರಸ್ಸರ ಸೇವಾಮಾಡುವಂಥ, **ಮಹಾಪುರುಷರ**—ಪಾದಪಾಂಸುವ ಧರಿಸಿ—ಶ್ರೀ ಗುರುಗಳ ಅನುಗ್ರಹಕ್ಕೆ ಪಾತ್ರರಾದ ಮಹಾನುಭಾವರ ಪಾದರೇಣುಗಳನ್ನು ಶಿರಸ್ಸಿನಲ್ಲಿ ಧಾರಣಾ ಮಾಡಿ, **ಅಸಂಶಯನಪ್ಪುದೇ**—ಸಂಶಯದ ರಹಿತನಾಗುವುದೇ ಫಲವಿದು ಬಾಳ್ದುದಕೆ.

ಸಂಸ್ಥಾನ—ಭಗವದಧಿಷ್ಠಾನಗಳು, ಭಗವಂತ ನೆಲೆಸಿರುವ ಸ್ಥಾನಗಳು. ಅನುದಿನದಿ—ಪ್ರತಿನಿತ್ಯ. ಪಾಂಸು—ಧೂಳಿ, ಪದಪಾಂಸುವ—ಪಾದಧೂಳಿಯನ್ನು.

(ಛೀ.) ಪ್ರತಿಯೊಬ್ಬ ವ್ಯಕ್ತಿಗೂ—೧. ಸ್ವರೂಪ ದೇಹ, ೨. ಲಿಂಗದೇಹ ೩. ಅನಿರುದ್ಧ ದೇಹ ಮತ್ತು ೪. ಸ್ಥೂಲದೇಹಗಳೆಂದು ನಾಲ್ಕು ದೇಹಗಳಿರುತ್ತವೆ. ಈ ನಾಲ್ಕೂ ದೇಹಗಳಲ್ಲಿರುವ ೫ ಜ್ಞಾನೇಂದ್ರಿಯಗಳು, ೫ ಕರ್ಮೇಂದ್ರಿಯಗಳು, ಪಂಚತನ್ಮಾತ್ರಗಳು, ಅವ್ಯಕ್ತತತ್ವ, ಮಹತ್ತತ್ವ, ಅಹಂಕಾರತತ್ವ ಮತ್ತು ಮನಸ್ತತ್ವ

ಎಂಬ ಹತ್ತೊಂಬತ್ತು ತತ್ವಗಳಲ್ಲಿ ಹಂಸಾದಿ ಹತ್ತೊಂಬತ್ತು ಭಗವದ್ರೂಪಗಳಿರುತ್ತವೆ. ಇವುಗಳನ್ನು ತಿಳಿದು ಉಪಾಸನೆ ಮಾಡಬೇಕೆಂದು "ಜೀವಲಿಂಗನಿರುದ್ಧ...." ಎಂಬ ಹರಿಕಥಾಮೃತಸಾರದ 7ನೇ ಸಂಧಿ 3ನೇ ಪದ್ಯದಲ್ಲಿ ಹೇಳಿದೆ; ಅದನ್ನು ತಿಳಿದುಕೊಂಡು ಅನುಸಂಧಾನಮಾಡಿಕೊಳ್ಳಬೇಕೆಂದು ಭಾವ.

(ಸೂಚನೆ :– ಸಂಕರ್ಷಣ ಒಡೆಯರ ಟೀಕಾದಲ್ಲಿ ಈ ಹಂಸಾದಿ ಹತ್ತೊಂಬತ್ತು ರೂಪಗಳನ್ನು ಯಾವ ಯಾವ ಅಧಿಷ್ಠಾನಗಳಲ್ಲಿ ಚಿಂತಿಸಬೇಕೆಂಬುದನ್ನು ಸ್ಪಷ್ಟವಾಗಿ ತೋರಿಸಿದ್ದಾರೆ – ಸಂಪಾದಕ.)

**ಪವನಮತಾನುಗ(ರವ)ನಾ(ತಾ)ನಹುದೆಂ ।**
**ದವನಿಯೊಳಗೆ ಸತ್ಕವಿಜನರ ॥**
**ಭವನ(ಂ)ಗಳಲಿ ಪ್ರತಿದಿವಸದಿ (ಸಂಚರಿಸುತ) ಸುಕಥಾ ।**
**ಶ್ರವಣವ ಮಾಡುತ ಪ್ರವರನಾಗುವನೇ ॥೧೦॥**

**ಪವನಮತಾನುಗ**—'ಪವನಮತ' – ವಾಯುದೇವರು ಶ್ರೀಮದಾಚಾರ್ಯರಾಗಿ ಅವತಾರಮಾಡಿ ಏಕವಿಂಶತಿ ಕುಭಾಷ್ಯದೂಷಣೆ ಪೂರ್ವಕವಾಗಿ ಹರಿ ಸರ್ವೋತ್ತಮ. ವಾಯುಜೀವೋತ್ತಮ, ತಾರತಮ್ಯ, ಪಂಚಭೇದ ಸತ್ಯವೆಂದು ವೇದೋಕ್ತಾನುಸಾರ ಸ್ಥಾಪನ ಮಾಡಿದ ಶಾಸನರೂಪಶಾಸ್ತ್ರ ಅಂತ ತಾತ್ಪರ್ಯ. ಅದನ್ನು ಅನುಸರಿಸೋಣ ಅಂದರೆ ಓದುವುದು ಮಾತ್ರಯೆಂತಾಗಲೀ, ಚಿಂತನಮಾತ್ರದಿಂದಾಗಲೀ ಅಂತ ತಾತ್ಪರ್ಯವಲ್ಲ. ಪವನಶಾಸ್ತ್ರ ಓದೋಣ, ಶ್ರವಣ ಮನನ ಮಾಡೋಣ. ಮತ್ತು ಸದ್ಗತಿಗಾಗಿ ಓದೋಮಾತ್ರದಿಂದ ಸದ್ಗತಿ ಆಗತ್ತೆ ಎಂತ ತಾತ್ಪರ್ಯವಲ್ಲ. ಸರ್ವಜ್ಞರ ಶಾಸ್ತ್ರದಲ್ಲಿ ಸದ್ಗತಿ ಹೊಂದೋಣಕ್ಕೆ ತೋರಿಸಲ್ಪಟ್ಟ ಮಾರ್ಗಗಳು:– ಅಹಂ-ಮಮತಾ ತ್ಯಾಗ, ಅಹಂ ಕರ್ತಾ, ಅಹಂ ಭೋಕ್ತಾ, ಅಹಂ ಸ್ವತಂತ್ರಃ ಎಂಬೆಲ್ಲವನ್ನೂ ತ್ಯಾಗಮಾಡಿ ನಿಷ್ಕಾಮನಾಗಿ ವಿಷಯಾಸಕ್ತಿರಹಿತನಾಗಿ ಯದೃಚ್ಛಾಲಾಭಸಂತುಷ್ಟನಾಗಿ, ಲಾಭಾಲಾಭಗಳಲ್ಲಿ ಸಮಚಿತ್ತನಾಗಿ (ಮನೋ ಉದ್ವೇಗನಾಗದೆ) (ಸ್ವಾಮಿಯ) ಮಾಹಾತ್ಮ್ಯಪೂರ್ವಕ ಸುದೃಢ ಸ್ನೇಹ. ತಾರತಮ್ಯ ಪಂಚಭೇದ ಪೂರ್ವಕವಾಗಿ ಪರಮಾತ್ಮನಲ್ಲಿ ಮಾಡಿದರೆ. ಅಧಿಕಾರಿ ಸದ್ಗತಿ ಐದತಾನೆ ಅಂತ ಪವನಶಾಸ್ತ್ರದಲ್ಲಿ ಹೇಳತದೆ. ಇದನ್ನು ಅನುಸರಿಸುವವನು **ಅನುಗ**, ತದನ್ಯರು ಅಲ್ಲ ಎಂತಲೂ, ಆ ಮತಕ್ಕೆ ಅನುಸರಿಸಿದ ವೇಷಧಾರಿಗಳೆಂತಲೂ ಕರೆಸತಾರೆ. ಇಂಥಾ 'ಅನುಗತ್ವ' ಏಕಕಾಲಕ್ಕೆ ಸಿದ್ಧಿಸಲಾರದು. ಬೀಜಾಂಕುರ-ವೃಕ್ಷ ನ್ಯಾಯದಿಂದ ಬೆಳಸತಾ ಬಂದರೆ ದೊಡ್ಡದಾಗಿ ಮೋಕ್ಷಾಖ್ಯ ಫಲ ಹೊಂದತಾನೆ. ಆದ್ದರಿಂದ ಆಲೋಚನೆರೂಪವಾದ ತಪಸ್ಸಿನಿಂದ ಅಭ್ಯಾಸ ಮಾಡತಾ ಬರಬೇಕು. ಇಂಥಾ 'ಅನುಗನು' **ತಾನಹುದು ಎಂದು** – ತಾನು ನಿಶ್ಚಯ ಎಂಬುದನ್ನು ತನ್ನ

ಮನಸ್ಸನ್ನು ತಾನೇ ಶೋಧನ ಮಾಡಿಕೊಂಡು ನಿಷ್ಕಳಂಕನಾಗಿ .. ತನ್ನೊಳಗೆ ತಾನು ದಾರ್ಢ್ಯ ಮಾಡಿಕೊಂಡು, **ಅವನಿಯೊಳಗೆ**–ಭೂಮಿಯಲ್ಲಿ, **ಸತ್ಕವಿಜನರ**–ಸಮೀಚೀನ ಜ್ಞಾನಾಭ್ಯಾಸಕರು, ಜ್ಞಾನಸಿದ್ಧರಾದವರು, ಸತ್ಕವಿಗಳು, ಇಂಥವರ, **ಭವನಗಳಲಿ**–ಮನೆಗಳಲ್ಲಿ ಹೋಗಿ, **ಪ್ರತಿದಿವಸದಿ** – ಪ್ರತಿದಿನದಲ್ಲಿಯೂ, **ಸುಕಥಾ**–ಜ್ಞಾನ ಭಕ್ತಿ ವೈರಾಗ್ಯ ಹುಟ್ಟಿಸತಕ್ಕ ಕಥಾ, ಅವರ ದ್ವಾರಾ **ಶ್ರವಣವ** ಮಾಡುತ **ಪ್ರವರನಾಗುವದೇ**–ಅವರಿಂದ ಉತ್ತಮರೆಂದೂ. ಯೋಗ್ಯರೆಂದೂ ಕರೆಸಿಕೊಳ್ಳುವುದೇ ಫಲ ಮತ್ತು ಅವರಿಂದ ಹೆಚ್ಚಾಗಿ ಜ್ಞಾನ ಸಂಪಾದಿಸಿ ಅದನ್ನ ವೃದ್ಧಿಗೊಳಿಸಿಕೊಳ್ಳುವದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು.) ಪವನ – ಶ್ರೀ ಭಾರತೀಪತಿ ಶ್ರೀಮುಖ್ಯಪ್ರಾಣದೇವರ ಎಂದರೆ ಶ್ರೀಮದಾನಂದತೀರ್ಥರ ಮತಾವಲಂಬಿಗಳಾದ ವಿಷ್ಣುಭಕ್ತಿಯುಳ್ಳ ವೈಷ್ಣವರ ಅನುಸರಿಸಿದವ ನಾನಹುದೆಂದು ನಿಶ್ಚಯಜ್ಞಾನದಿಂದ ಭೂಮಂಡಲದೊಳಗೆ ತತ್ವಮಾರ್ಗ ಪ್ರದರ್ಶಕರಾದ ಮಹಾಜ್ಞಾನಿಗಳ ಮನೆಗಳಲ್ಲಿ ನಿತ್ಯ ನಿತ್ಯ ದಿವಸಗಳಲ್ಲಿ ಸಮೀಚೀನವಾಗಿ ನಾರಾಯಣನ ಮಂಗಳಕರವಾದ ಸತ್ಕಥಾ ಜ್ಞಾನಿಗಳ ಮುಖದಿಂದ ಶ್ರವಣಮಾಡುತಾ, **ಪ್ರವರನಾಗುವದೆ**–ಸತ್ವಾಧಿಕಾರಿಯೆಂದು ಸ್ವರೂಪ ಸುಖಿಯ್ಯದಿ ಮುಕ್ತನಾಗುವದೇ ಫಲವಿದು ಬಾಳ್ದುದಕೆ.

ಪವನ–ವಾಯು, ಮುಖ್ಯಪ್ರಾಣ. ಪವನಮತಾನುಗರವ – ಮಧ್ವಮತಾವಲಂಬಿಯಾದವನು, ಅವನಿ – ಭೂಮಿ. ಸತ್ಕವಿಜನರ – ಮಹಾ ಜ್ಞಾನಿಗಳ, ಪ್ರವರ–ಶ್ರೇಷ್ಠ.

(ಭೀ.) ಸಜ್ಜನರ ಸಹವಾಸ ದೊರಕುವುದೂ ಭಗವಂತನ ಕೃಪೆಯಿಂದಲೇ-ಉದ್ಧಾರವಾಗುವ ಕಾಲ ಬಂದಾಗ ಭಗವಂತ ಸಜ್ಜನರ ಸಹವಾಸವನ್ನು ಅನುಗ್ರಹಿಸುವನು. ಸಜ್ಜನರ ಸಹವಾಸದಿಂದ ಹರಿಕಥಾಶ್ರವಣಲಾಭವಾಗುತ್ತದೆ. ಅದರಿಂದ ಮನಸ್ಸು ಪರಿಪಕ್ವವಾಗಿ ಭಗವಲ್ಲೀನವಾಗುತ್ತದೆ. ಆ ಮೂಲಕ ಭಗವದಪರೋಕ್ಷವೂ ತನ್ಮೂಲಕ ಮುಕ್ತಿಯೂ ಲಭಿಸುವುದೆಂಬ ಪ್ರಮೇಯವು ಭಾಗವತದ ಈ ಶ್ಲೋಕದಲ್ಲಿ ನಿರೂಪಿಸಲ್ಪಟ್ಟಿದೆ—

ಸತ್ಸಂಗಮೋ ಯರ್ಹಿ ತದೈವ ಸದ್ಗತೌ
ಪರಾವರೇಶೇ ತ್ವಯಿ ಜಾಯತೇ ರತಿಃ ।
ಸತಾಂ ಪ್ರಸಂಗಾನ್ಮಮ ವೀರ್ಯಸಂಪದೋ
ಭವಂತಿ ಹೃತ್ಕರ್ಣರಸಾಯನಾಃ ಕಥಾಃ ॥
ತಜ್ಜೋಷಣಾದಾಶ್ವಪವರ್ಗವರ್ತ್ಮನಿ
ಶ್ರದ್ಧಾವತೀ ಭಕ್ತಿರನುಕ್ರಮಿಷ್ಯತಿ ॥

**ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ ।**
**ಸ್ತುತಿಸುತ ಲಕ್ಷ್ಮೀಪತಿಗುಣವ ॥**
**ಕೃತಿಪತಿ ಸೃಷ್ಟಿಸ್ಥಿತಿಲಯಕೆ ಕಾರಣ ।**
**ಇ(ನಿ)ತರ ಸರ್ವ ದೇವತೆಗಳೆಂಬುದೆ (ಗಳಿಗಿನಿತಿಲ್ಲೆಂಬುದ) ॥೧೦॥**

(ಈ ನುಡಿಯು ಇತರ ಆವೃತ್ತಿಗಳಲ್ಲಿ ೨೫ನೆಯ ನುಡಿಯಂತಿದೆ) *

**ಪ್ರತಿದಿವಸ**–(ಅಧಿಕಾರಿಯಾದವನು) ಪ್ರತಿದಿನವೂ ಪರಮಾತ್ಮನ ಗುಣವನ್ನು ಸ್ತೋತ್ರ ಮಾಡಬೇಕು. ಆ ಗುಣಗಳ ಜ್ಞಾನ ಗುರುಮುಖದಿಂದಾಗಬೇಕು. ಸಚ್ಛಾಸ್ತ್ರ ಶ್ರವಣವು ವೇದಶ್ರುತಿಗಳೂ, ಸ್ಮೃತಿರೂಪವಾದ ಪುರಾಣಗಳೂ ಶ್ರವಣಮಾಡಿದವನಾಗಿ ತದರ್ಥ ತಿಳಿದುಕೊಂಡವನಾಗಿ. ಹಾಗೆ ತಿಳಿದುಕೊಂಡ ಗುಣಗಳನ್ನು **ಸಂಸ್ತುತಿಸುತ**–ಛಂದಾಗಿ ಸ್ತೋತ್ರ ಮಾಡುತಾ, **ಕೃತಿಪತಿ**–ಕೃತಿ ಎಂಬ ಲಕ್ಷ್ಮೀದೇವೇರ ಪತಿಯಾದ ಪ್ರದ್ಯುಮ್ನ, ಇವನು ಸೃಷ್ಟಿಕರ್ತಾ – ಕ್ರಮ ಹೇಗೆಂದರೆ ವಾಸುದೇವನು ಬ್ರಹ್ಮನ ಸೃಷ್ಟಿಮಾಡಿದ, ಸಂಕರ್ಷಣನು ಸೂತ್ರನಾಮಕ ವಾಯುದೇವರನ್ನ ಸೃಷ್ಟಿಮಾಡಿದ, ಪ್ರದ್ಯುಮ್ನ ಸರಸ್ವತೀ ಭಾರತೀದೇವೇರನ್ನ ಸೃಷ್ಟಿಮಾಡಿದ, ಬ್ರಹ್ಮವಾಯುಗಳು ಗರುಡಶೇಷಾದಿಗಳನ್ನ ಸೃಷ್ಟಿಮಾಡಿದರು. ಇವರಿಗೆ ಇತರರಾದ ಇಂದ್ರಾದಿ ಯಾವತ್ತೂ ದೇವತೆಗಳನ್ನ ಅಂಡದ ಹೊರಗೆ, ಸೂಕ್ಷ್ಮಸೃಷ್ಟಿಯೊಳಗೆ ಪ್ರದ್ಯುಮ್ನ ಅರ್ಧನಾರೀರೂಪದಿಂದ ಸೃಷ್ಟಿಮಾಡಿದನೆಂದು ತಾತ್ಪರ್ಯ.

ಸ್ಥಿತಿಕರ್ತನಾದವ ಸಾಕ್ಷಾತ್ ವಿಷ್ಣು, ಲಯಕರ್ತನಾದವ ಸಂಕರ್ಷಣನು. ಅನಿರುದ್ಧನು ಸ್ಥೂಲಸೃಷ್ಟಿಕರ್ತ, ಕಾರಣ ಅನಿರುದ್ಧಾದಿ ನಾಲ್ಕು ರೂಪಗಳಿಗೆ ಮೂಲ

---

* (i) ಕಂಸಿನಲ್ಲಿ ತೋರಿಸಿದ ಪದಗಳು ಪಾಠಭೇದಗಳು.
(ii) ಉಳಿದ ಪ್ರತಿಗಳಲ್ಲಿ ಈ ನುಡಿ ೨೬ನೆಯದಾಗಿ ಗ್ರಹಿಸಲ್ಪಟ್ಟಿದೆ. ಆದರೆ ಹರಿದಾಸಭಾರತಿ ವಿಜಯಾಂಕ ೧೯ (೧೯೮೭) ಇದರಲ್ಲಿ ಈ ನುಡಿಯು ೨೪ನೆಯದಾಗಿ ಪ್ರಕಟವಾಗಿದೆ. ಪ್ರಕೃತದ ವ್ಯಾಖ್ಯಾನಕಾರರು ೧೦ನೆಯದೆಂದು ಗ್ರಹಿಸಿದ್ದಾರೆ. (iii) ಶ್ರೀ ಪ್ರಾಣೇಶದಾಸರ ಮೂಲ ಹಸ್ತಪ್ರತಿಯಲ್ಲಿ ಮತ್ತು ಶ್ರೀ ದಾಸರಕಟ್ಟಿ ಮಾನವಿ ಪುಸ್ತಕದಲ್ಲಿ ಈ ನುಡಿ ಇಲ್ಲವೆಂದು ಲಿಂಗಸೂಗೂರಿನ ಪ್ರಕಾಶನ ೬೪–ಸಂಚಿಕೆ–೩, ೧೯೫೮-ಪುಟ ೧೧೪ರಲ್ಲಿ ಹೇಳಿದ್ದಾರೆ. ಈ ನುಡಿಯು ಮೂಲತಃ ೨೫ನೆಯ ನುಡಿಯೆಂದು ಹೇಳಿದ್ದಾರೆ. ಆದರೆ ದಾಮೋದರದಾಸರ ಹಸ್ತಪ್ರತಿಯಲ್ಲಿ ಈ ನುಡಿ ಇದೆಯೆಂದು ಸಿಂಧುಶಯನ ಪ್ರಕಾಶನ ೧೯೮೧ (ಪುಟ ೨೦೧) ಹೇಳಲಾಗಿದೆ. ಇದರಿಂದ ಈ ಎರಡು ನುಡಿಗಳು ೨೫-೨೬. ದಾಮೋದರದಾಸರ ಹಸ್ತಪ್ರತಿಯಲ್ಲಿ ಇದು ೨೬ನೆಯ ನುಡಿಯೆಂದು ತೋರುತ್ತದೆ. ಪ್ರಾಣೇಶದಾಸರು, ದಾಮೋದರದಾಸರು ಇಬ್ಬರೂ ಶ್ರೀಜಗನ್ನಾಥ ದಾಸರ ಕಾಲದಲ್ಲಿಯೇ ಬರೆದವರು. ದಾಮೋದರದಾಸರ ಹಸ್ತಪ್ರತಿ ಕ್ರಿ. ಶ. 1770ರಕ್ಕಿಂತ ಪೂರ್ವದ್ದು. ಈ ಎರಡೂ ಹಸ್ತಪ್ರತಿಗಳನ್ನು ಜೊತೆಗೆ ತುಲನೆ ಮಾಡಿಯೇ ನಿಜಾಂಶವನ್ನ ನಿರ್ಣಯಿಸಲು ಸಾಧ್ಯ.

ಕಾರಣ ನಾರಾಯಣರೂಪ. ಈ ಪ್ರಕಾರ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಪರಮಾತ್ಮನ ಗುಣಗಳನ್ನ ಪೂರ್ವೋಕ್ತಪ್ರಕಾರ ಸ್ತೋತ್ರ ಮಾಡತಾ, ಸ್ವಾಮಿ ಸರ್ವೋತ್ತಮ, ನಾನು ಅವನ ಭೃತ್ಯ, ಸ್ವಾಮಿ ಸರ್ವಸ್ವತಂತ್ರ, ನಾನು ಅವನ ಅಧೀನವಾದ ಸ್ವಾತಂತ್ರ್ಯವುಳ್ಳವ ಎಂದು ಅಂಬೋಣವೇ ಬದುಕಿದ್ದಕ್ಕೆ ಫಲವೆಂತ ತಾತ್ಪರ್ಯ. ಒಂದೊಂದು ಇಂದ್ರಿಯದಲ್ಲಿ ಪ್ರದ್ಯುಮ್ನ, ಸಂಕರ್ಷಣ ವಿಷ್ಣುರೂಪ-ದಿಂದ ಇದ್ದು, ಈ ದಶೇಂದ್ರಿಯಗಳ ವ್ಯಾಪಾರವನ್ನ ಅನಾದಿಕರ್ಮವನ್ನನುಸರಿಸಿ ಸೃಷ್ಟಿಮಾಡತಕ್ಕವ ಪ್ರದ್ಯುಮ್ನ, ಸ್ಥಿತಿರೂಪವಾದ ವ್ಯಾಪಾರವನ್ನ ನಡೆಸತಕ್ಕವ ವಿಷ್ಣು, ಅವನ ಸಂಹಾರಮಾಡತಕ್ಕವ ಸಂಕರ್ಷಣ. ಹೀಗೆ ತಿಳಿದು ಹರಿಯ ಆಜ್ಞಾನುಸಾರ ಇಂದ್ರಿಯವ್ಯಾಪಾರಗಳನ್ನ ಪ್ರತಿದಿನದಲ್ಲಿಯೂ, ಪ್ರತಿಕ್ಷಣದಲ್ಲಿಯೂ ನಡೆಸತಾರೆಂದು ಅನುಸಂಧಾನಮಾಡಬೇಕು. ಅಲ್ಲದೇ ತಾವು ಮಾಡಿದ ವ್ಯಾಪಾರ-ಗಳನ್ನ ಆಯಾ ಇಂದ್ರಿಯಾಂತರ್ಗತ ಭಗವಂತಗೆ ಅರ್ಪಿಸತಾ ಇರುವರೆಂಬೋದೇ ಬದುಕಿದ್ದಕ್ಕೆ ಫಲವೆಂದರ್ಥ.

(ಗು.) **ಪ್ರತಿದಿವಸ**–ನಿತ್ಯ ದಿವಸಗಳಲ್ಲಿ, **ಶ್ರುತಿ**–ವೇದಗಳಿಂದ, **ಸ್ಮೃತಿಗ-ಳಿಂದ**–ಶಾಸ್ತ್ರಗಳಿಂದ, **ಸಂಸ್ತುತಿಸುವ**–ಸಮೀಚೀನವಾಗಿ ಸ್ತೋತ್ರ ಮಾಡಿಸಿಕೊಳ್ಳ-ಲ್ಪಟ್ಟಂಥ, **ಲಕ್ಷ್ಮೀಪತಿಗುಣವ** – ನಾರಾಯಣನ ಮಂಗಳಗುಣಗಳ ಕೊಂಡಾಡಿ-ಕೊಳ್ಳತಾ, ಕೃತಿಪತಿ ಶ್ರೀಪ್ರದ್ಯುಮ್ನ, **ಸೃಷ್ಟಿ**–ಅನಂತಾನಂತ ಬ್ರಹ್ಮಾಂಡದ ಸೃಷ್ಟಿಗೆ, **ಸ್ಥಿತಿ**–ತ್ರಿವಿಧ ಜೀವರಿಗೆ ಸ್ವಯೋಗ್ಯವಾದ ಸ್ಥಿತಿಗೆ (ಪಾಲನೆಗೆ), **ಲಯಕಾರಣ**–ಸಮಸ್ತ ಜೀವರ ಲಯಗಳಿಗೆ ಕಾರಣೀಭೂತನಾದಂಥಾತ. ಅವನ ತರುವಾಯ ಇತರ ಉಳಿದ ದೇವತೆಗಳು ಬ್ರಹ್ಮರುದ್ರೇಂದ್ರಾದಿಗಳೆಂದು ಜ್ಞಾನಿಗಳ ಮುಖದಿಂದ ಶ್ರವಣ ಮಾಡಿ ನಾರಾಯಣನ ಮಂಗಳ ಗುಣಗಳ ತಿಳಿದು ದಿನಗಳ ಕಳೆವುದೇ ಫಲವಿದು ಬಾಳ್ದುದಕೆ.

ಕೃತಿಪತಿ–ಪ್ರದ್ಯುಮ್ನ (ಶ್ರೀಹರಿ). ಇನಿತು–ಕಿಂಚಿತ್ತು, ಎಳ್ಳಷ್ಟು, ಸ್ವಲ್ಪ.

(ಭೀ.) 'ಶ್ರುತಿಸ್ಮೃತಿಗಳಿಂದ ಸಂಸ್ತುತಿಸುತ' ಎಂಬಲ್ಲಿ — 'ಇತಿಹಾಸ-ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್' ಎಂಬ ಪ್ರಮಾಣಾನುಸಾರ ವೇದೋಕ್ತ ಭಗವನ್ಮಹಿಮೆಗಳನ್ನು ಇತಿಹಾಸ ಪುರಾಣಗಳಿಂದ ವೃದ್ಧಿಗೊಳಿಸಿಕೊಂಡು ದಾರ್ಢ್ಯವನ್ನು ಪಡೆಯಬೇಕೆಂಬುದನ್ನು ಇದು ಸೂಚಿಸುತ್ತದೆ.

**ಗುಣಕಾಲಾಹ್ವಯ ಆಗಮಾರ್ಣವ ಕುಂ ।**
**ಭಿಣಿ ಪರಮಾಣ್ವಂಬುಧಿಗಳಲಿ ॥**

**ವನಗಿರಿನದಿ (ಪೊದೆ) ಮೊದಲಾದದರೊಳಗಿಂ ।**
**ಧನಗತ ಪಾವಕನಂತಿಹನೆಂಬುದೆ ॥೧೨॥**

(ಇತರ ಪಾಠಗಳಲ್ಲಿ ಇದು ೨೧ನೆಯ ನುಡಿಯಾಗಿದೆ.)

**ಗುಣ**–ಸತ್ವ, ರಜ, ತಮೋಗುಣ ಸಮೂಹದಲ್ಲಿ. **ಕಾಲ**–ಕ್ಷಣಾದ್ಯವಧಿ ಕಾಲಗಳಲ್ಲಿ, **ಆಹ್ವಯಂ**–ಆಯಾನಾಮಗಳಿಂದ ಇದ್ದು, **ಅಗಮಾರ್ಣವ** – ಅನಂತ ವೇದಸಾಗರದಲ್ಲಿ ವೇದಸಾಂಕೇತದಿಂದ ತಜ್ಜನಿತ ಪೌರುಷೇಯ ಪುರಾಣಗಳಲ್ಲಿ, **ಕುಂಭಿಣಿ ಪರಮಾಣು**–ಭೂಪರಮಾಣುಗಳಲ್ಲಿ, **ಆಹ್ವಯಂ**–[ಆವರ್ತನ ಮಾಡಿಕೊಂಡು] ಆ ಹೆಸರಿನವನಾಗಿ ಅಥವಾ **ಅಂಬುಧಿಗಳಲಿ**–ದಿಕ್ಪ್ರದರ್ಶನದಿಂದ ಸಪ್ತಸಮುದ್ರದಲ್ಲಿಯ ಉದಕದ ಪರಮಾಣುಗಳಲಿ ಇರುವವನಾಗಿದ್ದಾನೆಂದು ತಿಳಿದು, **ವನ**–ವನಗಳು, ವೃಕ್ಷಸಮೂಹಗಳ ವನ ಎಂತ ಸಾಂಕೇತ. [ತೃಣಾದಿಗಳೂ ಗ್ರಾಹ್ಯ] **ಗಿರಿ** – ಪರ್ವತಾದಿಗಳು [ಮೇರುಮಂದರಾದಿಗಳೂ ಗ್ರಾಹ್ಯ], **ನದಿ** – ಗಂಗಾದಿ ಯಾವತ್ತೂ ಪ್ರಸಿದ್ಧ ನದಿಗಳು [ಅಪ್ರಸಿದ್ಧ ನದಿಗಳೂ ಗ್ರಾಹ್ಯ], ಇವುಗಳಲ್ಲಿ ಆಯಾ ಶಬ್ದವಾಚ್ಯನಾಗಿ, **ಮೊದಲಾದದರೊಳಗೆ**–ಇವೇ ಮೊದಲಾದ-ಅವಶಿಷ್ಟ ಉಳಿದ ಯಾವತ್ತರದಲಿ ಆಯಾ ನಾಮಗಳಿಂದ ಇರುವವನೆಂದು, ಅಂದರೆ **ಇಂಧನಗತ**–ಕಾಷ್ಠಗತ, **ಪಾವಕನಂತೆ**–ಅಗ್ನಿಯಂತೆ ಮುಂಚೆ ಅಂತರ್ಗತನಾಗಿ ಇರುವನೆಂದು ತಿಳಿಯೋಣವೇ ಬದುಕ್ಕಿದ್ದಕ್ಕೆ ಫಲ. 'ಇಂಧನಗತ' ವೆಂಬ ದೃಷ್ಟಾಂತದಿಂದ ಕಾಷ್ಠಗತ ಅಗ್ನಿ ಹ್ಯಾಂಗೆ ಕಾಣೋದಿಲ್ಲವೋ ತದ್ವತ್ ಕಾಣುವುದಿಲ್ಲವೆಂದರ್ಥ. ಇಂಥಾ ಕಾಣದ ಪರಮಾತ್ಮನನ್ನು ಕಾಣಬೇಕಾದರೆ ಕಾಷ್ಠದಲ್ಲಿ ಅಗ್ನಿ ಇದೆ ಎಂಬ ನಿಶ್ಚಯದಿಂದ ಅಗ್ನಿಯನ್ನು ಪಡೆಯುವ ನಿಮಿತ್ತ ಮಥನ ಮಾಡಿದರೆ, ಆ ಮಥನದಿಂದ ವ್ಯಕ್ತನಾದ ಅಗ್ನಿಯಂನ್ನು ಹ್ಯಾಂಗೆ ಕಾಣತಾರೋ ಹಾಗೆಯೇ ಕಾಷ್ಠಸದೃಶ ಅಧಿಷ್ಠಾನ (ದೇಹ), ಅಗ್ನಿಸದೃಶ ಪರಮಾತ್ಮನನ್ನು ಕಾಣಬೇಕಾದರೆ ಸಚ್ಛಾಸ್ತ್ರಗಳ ಶ್ರವಣ, ಮನನ, ನಿಧಿಧ್ಯಾಸನಾದಿ ರೂಪದಿಂದಲೂ, ಜಡ-ಚಲ ಪ್ರತೀಕಾದಿ ಪೂಜಾದಿಗಳಿಂದಲೂ ಇಂಥ ಮಥನದಿಂದ ಪರಮಾತ್ಮ ಕಾಣತಾನೆ. ತದ್ವ್ಯತಿರಿಕ್ತ ಕಾಣೋದಿಲ್ಲವಾದ್ದರಿಂದ ಗುರುದ್ವಾರಾ ಶ್ರವಣ ಮನನಾದಿಗಳನ್ನ ಮಾಡತಾ, ಚಲ–ಅಚಲ ಪ್ರತೀಕಗಳಲ್ಲಿ ಜ್ಞಾನ ಭಕ್ತಿ ವೈರಾಗ್ಯ ಪೂರ್ವಕ ನಿಸ್ಸಂಗನಾಗಿ ಅಧಿಷ್ಠಾನಗಳ ತಾರತಮ್ಯ ತಿಳಿದು ಪೂಜಾದಿಗಳನ್ನ ಮಾಡಬೇಕೆಂಥ ತಾತ್ಪರ್ಯ. 'ತತ್' ಶಬ್ದ ವಾಚ್ಯವೆಂದು ಹೇಳೋಣದರಿಂದ ಸರ್ವವೂ ಪರಮಾತ್ಮನ ಪ್ರತೀಕಗಳಾಗಿ ಅದರದರ ನಾಮಗಳು ಪರಮಾತ್ಮನ ನಾಮಗಳಾಗತವೆ. ಆದ್ದರಿಂದ ದಾವ ಪದಾರ್ಥ ನಾಮ ಉಚ್ಚಾರಮಾಡಿದಕಾಲಕ್ಕೂ ಪರಮಾತ್ಮನ ನಾಮೋಚ್ಚಾರವೆಂತಲೇ ಕ್ಷಣ ಕ್ಷಣಕ್ಕೂ ಅನುಸಂಧಾನವಿರಬೇಕು. ಮತ್ತು 'ಸರ್ವತ್ರವ್ಯಾಪ್ತ' ವೆಂತ ಹೇಳೋಣದರಿಂದ ಕೃತ್ಯ–ಅಕೃತ್ಯಗಳು ಪ್ರಾಣಿಗಳು

ಮಾಡೋದರಲ್ಲಿ ಅನ್ಯರಿಗೆ ತಿಳಿಯದೇನೆಯೆ ರಹಸ್ಯವಾಗಿ ಮಾಡಿ ಲೋಕದಿಂದ ಬಾಹ್ಯದಲ್ಲಿ ಸಂಭಾವಿತರೆಂದು ಕ ರೆ ಸ ತಾ ರೆ. ಕೃತ್ಯಾಕೃತ್ಯಗಳಿಗೆ ಫಲಕೊಡತಕ್ಕವ ಪರಮಾತ್ಮನೊಬ್ಬನೇ, ಅನ್ಯ ದಾವ ಜೀವರೂ ಅಲ್ಲ. ಆದ್ದರಿಂದ ಎಲ್ಲಾ ಕೃತ್ಯ-ಅಕೃತ್ಯಗಳನ್ನು ಸಾಕ್ಷಿಯಾಗಿ ನೋಡತಾ ಸರ್ವತ್ರದಲಿ ಇದ್ದಾನೆಂದು ಸ್ಮರಿಸಿ ರಹಸ್ಯ-ದಲ್ಲಿ ಕೂಡ ಅಕೃತ್ಯ ಮಾಡಬಾರದು. ಇದೇ ಸರ್ವತ್ರ ವ್ಯಾಪ್ತನೆಂಬುದರ ಅರ್ಥ. ಈ ವಿಧ ಆಚರಣೆಯೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು.) **ಗುಣಾಹ್ವಯ**-ಸತ್ವಗುಣ, ರಾಜಸಗುಣ, ತಾಮಸ ಗುಣಾಹ್ವಯ-ನಾಗಿಯೂ ವ್ಯಾಪ್ತನಾಗಿ ಗುಣಗಳಲ್ಲಿ ತದಾಕಾರ ತನ್ನಾಮದಿಂದ ಕರೆಸಿಕೊಳತಿಹ, **ಕಾಲಾಹ್ವಯ**-ಪ್ರಾತಃಕಾಲ. ಮಧ್ಯಾಹ್ನಕಾಲ, ಸಾಯಂಕಾಲ, ಮ ಹ ಕಾ ಲ, ಅಣುಕಾಲ ಲವತ್ರುಟಿಗಳಲ್ಲಿದ್ದು ಕಾಲನೆಂದು ಕರೆಸುವ "ಕಾಲಾತೀತ ಕಾಲನಿಯಾಮಕ ತ್ರಿಕಾಲಜ್ಞ । ಕಾಲಪ್ರವರ್ತಕ ಕಾಲನಿವರ್ತಕ ಕಾಲೋತ್ಪಾತಕ ಕಾಲಮೂರ್ತಿ" ಎಂಬಂತೆ ಅನಂತರೂಪಗಳಿಂದ ಗುಣಾಹ್ವಯನಾಗಿ ಕಾಲಾಹ್ವಯನಾಗಿ ತದಂತರ್ಗತ-ನಾಗಿ ಇರುತಿಪ್ಪನು, **ಆಗಮಾರ್ಣವ**-ವೇದಗಳ ಸಮೂಹದೊಳಗೆ ತದ್ವಾಚ್ಯದಿಂದ ತನ್ನಾಮಕನಾಗಿ ಕರೆಸತ ಶ್ರೀಪತಿ, **ಕುಂಭಿಣಿ**-ಭೂಮಿಯೊಳಗೆ, **ಪರಮಾಣು**-ಪರಮಾಣುರೂಪನಾಗಿಯೂ, **ಅಂಬುಧಿಗಳಲಿ**-ಸಮುದ್ರಗಳಲ್ಲಿಯೂ, **ವನಗಿರಿ**-ವನಾಂತಗಳೊಳಗೂ, **ನದಿ**-ಭಾಗೀರಥ್ಯಾದಿ ನದಿಗಳಲ್ಲಿ, **ಮೊದಲಾದದರೊಳಗೆ**-ಪೂರ್ವೋಕ್ತ ಪ್ರಕಾರ ಬ್ರಹ್ಮಾಂಡದಲ್ಲಿ ಜೀವಜಡಗಳಲ್ಲಿ. **ಇಂಧನಗತಪಾವಕ-ಸಂತಿಹನೆಂಬುದೆ**-ಕಾಷ್ಠದೊಳಗೆ ವ್ಯಾಪ್ತನಾದ ಅಗ್ನಿ ಇದ್ದ ಹಾಗೆ ತೋರಿ ತೋರದ ಹಾಗೆ ಶ್ರೀನಾರಾಯಣ ಅಂತರ್ಬಹಿರದಿ ವ್ಯಾ ಪ್ತ ನಿರ್ಲಿಪ್ತನಾಗಿ ತ್ರಿಜಗತ್ತಿನಲ್ಲಿ ಸರ್ವಕಾಲಗಳಲ್ಲಿ ಸರ್ವದೇಶದಲ್ಲಿ ತುಂಬಿಕೊಂಡಿದ್ದಾನೆಂದು (ತಿಳಿದು ಧ್ಯಾನಿಸುವುದೇ) ಫಲವಿದು ಬಾಳ್ವುದಕೆ.

ಆಹ್ವಯ-ನಾಮ. ಹೆಸರು. ಆಗಮ-ವೇದಗಳು. ಅರ್ಣ-ವರ್ಣ (ಅಕ್ಷರ)-ಗಳು. ಕುಂಭಿಣಿ – ಭೂಮಿ. ಅಂಬುಧಿ – ಸಮುದ್ರ. ಇಂಧನ – ಸೌದೆ, ಕಟ್ಟಿಗೆ. ಇಂಧನಗತ ಸೌದೆಯಲ್ಲಿ ಅಡಗಿರುವ, ಪಾವಕ-ಅಗ್ನಿ.

(ಭೀ.) ೧. 'ಗುಣಕಾಲಾಹ್ವಯ' ಎಂಬಲ್ಲಿ—ಭಾಗವತದಲ್ಲಿ (೧೧ಸ್ಕಂ, ೨ಅ. ೪೧ ಶ್ಲೋ.) ಹೇಳಿದಂತೆ "ಖಂ ವಾಯುಮಗ್ನಿಂ ಸಲಿಲಂ ಮಹೀಂ ಚ, ಜ್ಯೋತಿಂಷಿ ಸತ್ವಾನಿ ದಿಶೋ ದ್ರುಮಾದೀನ್ । ಸರಿತ್ ಸಮುದ್ರಾಂಶ್ಚ ಹರೇಃ ಶರೀರಂ, ಯತ್ಕಿಂಚ ಭೂತಂ ಪ್ರಣಮೇದನನ್ಯಃ ॥" ಎಂದರೆ ಆಕಾಶ, ಗಾಳಿ, ಬೆಂಕಿ, ನೀರು, ಭೂಮಿ, ನಕ್ಷತ್ರಗಳು, ಪ್ರಾಣಿಗಳು, ದಿಕ್ಕುಗಳು, ಗಿಡ-ಮರಗಳು, ನದಿಗಳು,

ಸಮುದ್ರಗಳೇ ಮೊದಲಾದ ಸಮಸ್ತ ವಸ್ತುಗಳು ಶ್ರೀಹರಿಯ ಶರೀರದಂತಿದ್ದು ಅವನ ಆವಾಸಸ್ಥಾನಗಳಾಗಿ ಅವನ ಅಧೀನದಲ್ಲಿರುವ ಪ್ರತೀಕಗಳು. ಇವುಗಳಲ್ಲೆಲ್ಲ ಶ್ರೀಹರಿ ಅಂತರ್ಯಾಮಿಯಾಗಿದ್ದು ಅವುಗಳಿಂದ ತತ್ತತ್ಕಾರ್ಯಗಳನ್ನು ನಡೆಸುತ್ತಿರುತ್ತಾನೆಂದು ತಿಳಿದು ಅವುಗಳ ಅಂತರ್ಯಾಮಿಯಾದ ಭಗವಂತನನ್ನು ಧ್ಯಾನಿಸಿ ನಮಸ್ಕರಿಸಿ ಪೂಜಿಸಬೇಕೆಂಬ ಉಪದೇಶದ ಸಂಗ್ರಹವೇ ಈ ನುಡಿ.

೨. ಇಂಧನಗತ ಪಾವಕನಂತಿಹನು ಎಂಬಲ್ಲಿ — ಅರಣಿ ( ಕಟ್ಟಿಗೆ ) ಯಲ್ಲಿ ಬೆಂಕಿಯು ಇದ್ದರೂ ಹೇಗೆ ಗೋಚರವಾಗುವುದಿಲ್ಲವೋ ಹಾಗೆ ಪರಮಾತ್ಮ ಸರ್ವತ್ರ ವ್ಯಾಪ್ತನಾಗಿದ್ದರೂ ಕಣ್ಣಿಗೆ ಕಾಣಿಸುವುದಿಲ್ಲವಾದರೂ ಕಾದ ಕಬ್ಬಿಣದಲ್ಲಿರುವ ಅಗ್ನಿಯು ಹೇಗೆ ಆ ಕಾದ ಕಬ್ಬಿಣಕ್ಕೆ ವಿವಿಧ ಆಯುಧಗಳಾಗುವ ಶಕ್ತಿಯನ್ನು ಕೊಟ್ಟರೂ ಸಹ ತಾನು (ಅಗ್ನಿ) ಸ್ವಯಂ ನಿರ್ಲಿಪ್ತವಾಗಿರುತ್ತದೋ ಹಾಗೆ ಭಗವಂತ ಸರ್ವತ್ರದಲ್ಲಿ ಅಗೋಚರನಾಗಿದ್ದು ಸಕಲ ವಸ್ತುಗಳ ಮತ್ತು ಪ್ರಾಣಿಗಳ ಸಕಲ ಪ್ರವೃತ್ತಿಗಳಿಗೂ ಪ್ರೇರಕನಾಗಿದ್ದಾನೆ ಎಂಬ ಪ್ರಮೇಯವು " ದೇಹೇಂದ್ರಿಯ ಪ್ರಾಣಮನೋಧಿಯೋಽಮೀ, ಯದಂಶವಿದ್ಧಾಃ ಪ್ರಚರಂತಿ ಕರ್ಮಸು । ನೈವಾನ್ಯದಾ ಲೋಹಮಿವಾ ಪ್ರತಪ್ತಂ, ಸ್ಥಾನೇಷು ತದ್‌ದ್ರಷ್ಟ್ರಪದೇಶಮೇತಿ ॥" (೬ ಸ್ಕಂ. ೧೬ಅ. ೨೪ಶ್ಲೋ) ಎಂದೂ "ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ. ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ । ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್, ಪ್ರಾಣಾನ್ ನಮೋ ಭಗವತೇ ತಸ್ಮೈ ॥" (೪ಸ್ಕಂ. ೧೦ಅ ೬ಶ್ಲೋ.) ಎಂದೂ ಭಾಗವತದಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಭಗವಂತನ ಈ ಪ್ರೇರಕಶಕ್ತಿಯನ್ನು ಅರಿತುಕೊಂಡು ಸರ್ವತ್ರ ಭಗವಂತನನ್ನು ಕಾಣುವುದೇ ಬಾಳಿದ್ದಕ್ಕೆ ಸಾರ್ಥಕ ಎಂದು ಭಾವ.

**ಏಕೋತ್ತರ ಪಂಚಾಶದ್ವರ್ಣಗ ।**
**ಳೇಕಾತ್ಮನ ನಾಮಂಗಳಿವು ॥**
**ಮಾಕಮಲಾಸನ ಮೊದಲಾದಮರರು ।**
**ಸಾಕಲ್ಯದಿ ಯಿಂವರ(ಸ)ರಿಯರೆಂಬುದೇ ॥೧೩॥**

**ಏಕೋತ್ತರ ಪಂಚಾಶತ್** – ಐವತ್ತೊಂದು (೫೧); **ವರ್ಣಗಳು**– ಅಕಾರಾದಿ ಕ್ಷಕಾರಾಂತ ವರ್ಣಗಳು. ಈ ಐವತ್ತೊಂದು ಅಕ್ಷರಗಳು, **ಏಕ–*** ಒಂದೊಂದೇ ಅಕ್ಷರ, **ಆತ್ಮನ**–ಪರಮಾತ್ಮನ, **ನಾಮಂಗಳು** – ನಾಮವರ್ಣಗಳು

* ಇಲ್ಲಿ 'ಏಕಾತ್ಮ' ಎಂದು ಒಂದೇ ಪದವೆಂದು ಗ್ರಹಿಸಿದರೂ 'ಏಕಾತ್ಮಾ ಹರಿರುದ್ದಿಷ್ಟಃ' ಎಂಬ ವಾಕ್ಯಾನುಸಾರ ಈ ಅಜಾದಿ ಐವತ್ತೊಂದು (೫೧) ವರ್ಣಗಳು ಶ್ರೀಹರಿಯ ನಾಮಗಳೆಂಬ ಅರ್ಥವೂ ಲಭಿಸುತ್ತದೆ.

ಎಂತ ಕರೆಸೋವಾಗತವೆ, **ಇವು**–ಈ ವರ್ಣಗಳೇ ಸರ್ವವೇದಗಳು, ಸರ್ವಪುರಾಣ-ಗಳು, ಸರ್ವ ಭಾಷಾ, ಸರ್ವ ಮಾತುಗಳು, ಸರ್ವಕ್ಕೂ ನಾಮಗಳಾಗಿವೆ. ಅ–ಅಜ-ನಾಮಕ, ಆ–ಆನಂದನಾಮಕ. ಈ ಪ್ರಕಾರ 'ಕ್ಷ' ದವರೆಗೆ ಇರೋವುದಾಗಿದೆಯೋ–ಇದರ ವಿವರ ಮಾತೃಕಾಮಂತ್ರದಿಂದ ತಿಳಿಯಬೇಕು. ಅಜಾದಿ ಅಕ್ಷರವಾಚ್ಯ ಪರಮಾತ್ಮನ ಗುಣಗಳು, **ಮಾ** – ಲಕ್ಷ್ಮೀದೇವೇರೇನು, **ಕಮಲಾಸನ**–ಬ್ರಹ್ಮದೇವರೇನು, **ಮೊದಲಾದಮರರು** – ಇವರೇ ಮೊದಲಾದ ರುದ್ರಾದಿ ದೇವತೆಗಳೇನು, **ಸಾಕಲ್ಯದಿ** – ಆದ್ಯಂತವಾಗಿ, **ಅರಿಯರು** – ತಿಳಿಯಲಾರರು. **ಅವರವರ** ಯೋಗ್ಯತಾನುಸಾರ ಅರಿಯುವರೆಂತ ತಾತ್ಪರ್ಯ, ಸಂಪೂರ್ಣ ಅರಿಯ-**ಲಾರರು.** ವರ್ಣಗಳನ್ನು ನಾಮಗಳೆಂದು ಯಾಕೆ ಹೇಳಿದ್ದಾರೆಂದರೆ, ದಾವ ಮಾತ-**ನಾಡಿದರೂ** ಪರಮಾತ್ಮನ ನಾಮಗಳನ್ನೇ ಉಚ್ಚಾರಮಾಡತೇನೆಂದು ಅನುಸಂಧಾನ-ವಿರಬೇಕೆಂತ ಅರ್ಥ. ಹಾಗೆಯೇ ದಾವ ಮಾತು ಕೇಳಿದ ಕಾಲಕ್ಕೂ ಹರಿಯ ನಾಮ **ಶ್ರವಣ**ವನ್ನೇ ಮಾಡತೇನೆ ಎಂತ ತಿಳಿಯಬೇಕು. ದಾವನಾದರೂ ಕೋಪಾದ್ವೇಷ-ದಿಂದ ಬೈದ ಕಾಲಕ್ಕೂ, ಆ ಬೈಯೋದರಲ್ಲಿ ವಿದ್ಯಮಾನಗಳಾದ ಅಕ್ಷರಗಳು ಯಾವತ್ತೂ ಶ್ರವಣ ತಾಡಿತವಾಗಲಿಕ್ಕೆ (ಕಿವಿಯಮೇಲೆ ಬೀಳುತ್ತಿರಲು ಎಂದರ್ಥ.) ಪರಮಾತ್ಮನ ನಾಮಗಳೇ ಶ್ರವಣ ತಾಡಿತವಾಗತದೆ ಎಂದು ಅನುಸಂಧಾನವಿರಬೇಕು. ಅವು ಬೈಗಳು ಎಂದು ತಿಳಿದರೆ, ರೋಷದ್ವೇಷಗಳು ಅತಿಶಯವಾಗಿ ಮಹಾಪಾತಕಕ್ಕೆ ಕಾರಣವಾಗತದೆ. ಆದ್ದರಿಂದ ಬೈಗಳು ಎಂದು ತಿಳಿಯದೇ ಭಗವಂತನ ನಾಮಗಳು ಎಂದು ಅನುಸಂಧಾನ ಮಾಡತಾ ಬಂದರೆ (ಒಳಗಿನ) ಅರಿಷಡ್ವರ್ಗಗಳು ನಾಶವಾಗತಾ ಬಂದು ಹರಿಯ ಅನುಗ್ರಹಕ್ಕೆ ಪಾತ್ರನಾಗುವನೆಂದು ( ಈ ಕಾರಣದಿಂದ ) ಇಲ್ಲಿ ಹೇಳಲ್ಪಟ್ಟಿದೆ. ರಮಾಬ್ರಹ್ಮಾದಿಗಳು ಪರಮಾತ್ಮನನ್ನ ಸಾಕಲ್ಯೇನ ತಿಳಿಯರು. ಎಂಬೋಣದರಿಂದ ಶ್ರೀಹರಿಯು ಅಪರಿಚ್ಛಿನ್ನ ಗುಣೋಪೇತನೆಂತಲೂ, ರಮಾ-ಬ್ರಹ್ಮಾದಿಗಳು ಪರಿಚ್ಛಿನ್ನ ಗುಣೋಪೇತರೆಂತಲೂ ಮತ್ತು ಪರಮಾತ್ಮನು ರಮಾ-ಬ್ರಹ್ಮಾದಿಗಳ ಗುಣಗಳನ್ನು ಸಾಕಲ್ಯೇನ ಬಲ್ಲವನೆಂತಲೂ ಆದರೆ ಅವರು ದಾರೂ ಇವನ ಗುಣಗಳನ್ನ ಸಾಕಲ್ಯೇನ ತಿಳಿಯರೆಂತಲೂ ಯೋಗ್ಯತಾನುಸಾರ ತಿಳಿಯಬಲ್ಲ-ರೆಂತಲೂ ಅರಿತುಕೊಂಡು ತ್ರಿಕರಣಶುದ್ಧಿಯಿಂದ ಆಚರಿಸುತ್ತಿರುವದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು.) **ಏಕೋತ್ತರ ಪಂಚಾಶದ್ವರ್ಣಗಳು** ಎಂದರೆ **ಅ** ಕಾರದಿಂದ ಆರಂಭಿಸಿ **ಳ** ವರೆಗಿರುವ ಐವತ್ತು ಅಕ್ಷರಗಳು, **ಕ್ಷ** ಎಂಬ ಅಕ್ಷರ ಸೇರಿ ಐವತ್ತೊಂದು ಆಗತದೆ. ಇದನ್ನೇ ಏಕೋತ್ತರ ಪಂಚಾಶತ್ ಎಂದಿದ್ದಾರೆ. ತಂತ್ರಸಾರದ ಪ್ರಥಮ ಅಧ್ಯಾಯದ ಆರಂಭದಲ್ಲಿ ಈ ಐವತ್ತು ವರ್ಣಗಳು, **ಪ್ರಣವದ**–ಓಂಕಾರದ **ಅಕಾರ ಉ** ಕಾರಾದಿ ಎಂಟು ವರ್ಣಗಳಿಂದ ಹೊರಟಿವೆಯೆಂದೂ, ಈ ಐವತ್ತು ವರ್ಣಗಳೂ

ಕ್ರಮವಾಗಿ ಅಜ, ಆನಂದ, ಇಂದ್ರಾದಿ ಳಾಳುಕ ಎಂದು ಅಂತವಾದ ಐವತ್ತು ಭಗವದ್ರೂಪಗಳಿಗೆ ವಾಚಕವಾಗಿವೆಯೆಂದೂ ಹೇಳಿದ್ದಾರೆ. ಈ ವರ್ಣಗಳಿಗೇ 'ಮಾತೃಕಾ' ಗಳೆಂದು ಹೆಸರು. ತಂತ್ರಸಾರದ ಎರಡನೇ ಅಧ್ಯಾಯದಲ್ಲಿ "ನೃಸಿಂಹಃ ಕ್ಷಸ್ಯ ದೇವತಾ" ಎಂದರೆ ಸಂಯುಕ್ತಾಕ್ಷರವಾದ ಕ್ಷ ಕಾರಕ್ಕೆ, ನರ - ಮೃಗರೂಪವುಳ್ಳ ನೃಸಿಂಹನೇ ದೇವತೆಯೆಂದೂ ಹೇಳಿದ್ದಾರೆ. ಇದರ ವಿವರಣೆಯನ್ನೇ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ತೋರಿಸಿದ್ದಾರೆ. ಹೀಗೆ ಐವತ್ತೊಂದು ವರ್ಣಗಳೂ ನೇರವಾಗಿ ನಾರಾಯಣನನ್ನೇ ಹೇಳತವೆ. ಪ್ರಪಂಚದಲ್ಲಿ ಬಳಕೆಯಾಗುವ ಸಕಲ ಪದಗಳೂ ಈ ಐವತ್ತೊಂದು ಅಕ್ಷರಗಳ ಯೋಜನೆಯಿಂದಲೇ ಆಗುವುದರಿಂದ ಸಕಲ ಶಬ್ದಗಳೂ ಭಗವಂತನ ನಾಮಗಳೇ ಆಗತವೆಯೆಂದೂ "ಪಂಚಾಶದ್ವರ್ಣಭಿನ್ನಾಶ್ಚ ಸರ್ವಶಬ್ದಾ ಅತೋಽಪಿ ಚ ।... ....ಸರ್ವಾಭಿದೋಽಸ್ಮ್ಯಹಮ್" ಅಂತ ಹೇಳಿದ್ದಾರೆ. ಇದನ್ನೇ ದಾಸರಾಯರು "ಏಕೋತ್ತರ ಪಂಚಾಶದ್ವರ್ಣಗಳು ಏಕಾತ್ಮನ-ಅಖಂಡ, ವಿರಾಡ್ರೂಪಿ ನಾರಾಯಣನ ನಾಮಂಗಳು" ಎಂದು ಹೇಳಿದ್ದಾರೆ, ಎಂದು ತೋರಿಸಿದ್ದಾರೆ. ಇಂಥಾ ಭಗವಂತನನ್ನು, **ಮಾ**–ರಮಾದೇವಿ. ಕಮಲಾಸನ–ಬ್ರಹ್ಮ, **ಮೊದಲಾದಮರರು**–ರುದ್ರೇಂದ್ರಾದಿ ದೇವತೆಗಳು, **ಸಾಕಲ್ಯದಿ**–ಪಾರಂಗತವಾಗಿ (ಸಂಪೂರ್ಣವಾಗಿ), **ಇವರು ಅರಿಯರು ಎಂಬುದೇ**–ತಿಳಿಯಲಾರರು (ಪರಂತು ತಮ್ಮ ತಮ್ಮ ಶಕ್ತ್ಯಾನುಸಾರ ತಿಳಿಯಬಲ್ಲರಾದ್ದರಿಂದ ನಾವೂ ನಮ್ಮ ಯಥಾಶಕ್ತಿ ತಿಳಿದು ಉಪಾಸನೆ ಮಾಡಬೇಕು) ಎಂಬುದೇ ಫಲವಿದು ಬಾಳ್ವುದಕೆ.

ಏಕೋತ್ತರ (ಏಕ+ಉತ್ತರ)–ಒಂದು ಹೆಚ್ಚಾಗಿರುವ. ಪಂಚಾಶತ್–ಐವತ್ತು. ಏಕೋತ್ತರ-ಪಂಚಾಶತ್ = ಐವತ್ತೊಂದು. ವರ್ಣಗಳು–ಅಕ್ಷರಗಳು (ಅಕಾರದಿಂದ ಳ ಕಾರದ ವರೆಗೆ ಐವತ್ತು ಅಕ್ಷರಗಳಾಗುತ್ತದೆ. ಕ್ಷ ಎಂಬುದು ತಂತ್ರಸಾರ ಪ್ರಕಾರ ೫೧ನೇ ಅಕ್ಷರ). ಏಕಾತ್ಮನ (ಏಕ+ಆತ್ಮ)–ಪರಮಾತ್ಮನ, ಸ್ವತಂತ್ರನೂ ಸಮಾಧಿಕರಹಿತನೂ ಆದ ಭಗವಂತನ(ಶ್ರೀಹರಿಯ). ಮಾಕಮಲಾಸನತ್ರ್ಯಕ್ಷಾದ್ಯಮರರು–ಮಾ–ಲಕ್ಷ್ಮೀದೇವಿ, ಕಮಲಾಸನ–ಬ್ರಹ್ಮದೇವರು, ತ್ರ್ಯಕ್ಷ–ಮೂರು ಕಣ್ಣುಗಳುಳ್ಳ ರುದ್ರದೇವರು, ಆದಿ–ಮೊದಲಾದ, ಅಮರರು–ದೇವತೆಗಳು. ಸಾಕಲ್ಯದಿ (ಸಕಲ ಶಬ್ದದ ಭಾವರೂಪ 'ಸಾಕಲ್ಯ')–ಸಂಪೂರ್ಣವಾಗಿ, ಆದ್ಯಂತವಾಗಿ.

(ಭೀ.) 'ಸಾಕಲ್ಯದಿ ತಾವರಿಯರು' ಎಂಬಲ್ಲಿ – 'ಅನಂತಾನಂತಗುಣಿತಾ—ಸ್ತೇಭ್ಯೋಽತ್ಯಂತವಿಲಕ್ಷಣಾಃ । ಅತ್ಯಾಶ್ಚರ್ಯಾ ರಮಾದೇಸ್ತು ಮನೋವಾಚಾಮಗೋಚರಾಃ ॥' "ಪೃಥಕ್ ಪೃಥಗನಂತಾನಿ ಪೃಥಕ್ ಪೂರ್ಣತಮಾನಿ ಚ । ರಮಾದ್ಯೈರಪ್ಯಚಿಂತ್ಯಾನಿ ಸಂತಿ ವಿಷ್ಣೌ ಜಗತ್ಪ್ರಭೌ ॥ " ಮತ್ತು "ಪರಸ್ಪರಮಭಿನ್ನಾಶ್ಚ ಧರ್ಮಾಃ ಸರ್ವೇಽಪಿ ತದ್ಗತಾಃ । ತದಭಿನ್ನಾಗುಣಾ ನಿತ್ಯ–ಮಪಿ

ಸರ್ವೇ ವಿಶೇಷತಃ ॥" ಎಂದೂ ಸತ್ತತ್ತ್ವರತ್ನಮಾಲಾದಲ್ಲಿ ಹೇಳಿದಂತೆ ಭಗವಂತನ ಅನಂತಗುಣಗಳನ್ನು ರಮಾಬ್ರಹ್ಮಾದಿಗಳೂ ಸಂಪೂರ್ಣವಾಗಿ ಅರಿಯರು.

**ಮೇದಿನಿ ಪರಮಾಣ್ವಂಬುಕಣಂಗಳ ।**
**ನೆನೆ(ನ್ನೆದ)ಬಹುದು ಪರಿಗಣನೆಯೆನು ॥**
**ಮಾಧವನಾನಂದದಿ ಗುಣಂಗಳ ।**
**ನಾದಿ ಕಾಲದಲಿ ಅಗಣಿತವೆಂಬುದೆ ॥೧೪॥**

(ಈ ನುಡಿ ಕೆಲವೆಡೆ ೧೬, ೧೭ ಮತ್ತು ೧೮ ಎಂದು ಪ್ರಕಟಿತವಾಗಿದೆ)

**ಮೇದಿನಿ**-ಭೂಮಿ, **ಪರಮಾಣು**-ಪರಮಾಣುಗಳು, ಪರಮಾಣುಗಳಿಗೆ ದೃಷ್ಟಾಂತ, ಗವಾಕ್ಷಿಯಿಂದ ವ್ಯಕ್ತವಾದ ಸೂರ್ಯನ ಕಿರಣಗಳಲ್ಲಿ ಓಡಾಡತಕ್ಕ ಧೂಳಿಗಳೊಳಗೆ ಒಂದು ಧೂಳಿ ಪರಮಾಣು ಎಂತ ಹೆಸರು. ಇದೇ 'ಭೂ' ಪರಮಾಣು ಅಂತ ಸಾಂಕೇತ. **ಅಂಬು**-ಉದಕ, **ಕಣಂಗಳು**-ದೃಷ್ಟಾಂತ-ಮಳಿಹನಿ ಗಾಳಿಯ ಸಂಯೋಗದಿಂದ ಒಂದಕ್ಕೆ ಒಂದು ಸಂಯೋಗವಾಗಿ, ಅದರಿಂದ ಉತ್ಪನ್ನ-ವಾದ ಆ ಸಣ್ಣದಾದ ತುಂತುರು ಹನಿ ದಾವದದೆ ಅದೇ ಅಂಬುಕಣ. ಇಂಥಾ ಪಂಚಾಶತ್‌ಕೋಟಿ ಭೂಮಿಯಲ್ಲಿ ವಿದ್ಯಮಾನವಾದ ಭೂರೂಪವಾದ ಪ್ರಕೃತಿ ಪರಮಾಣುಗಳೇನು. ಸಪ್ತಸಮುದ್ರಗತ ಉದಕದಲ್ಲಿ ವಿದ್ಯಮಾನವಾದ ಉದಕರೂಪ-ವಾದ ಕಣಗಳೇನು, ಈ ಉಭಯಗಳ, **ನೆನೆಬಹುದು** ಎಣಿಸಬಹುದು, ಬರೇ ಎಣಿಸೋಣವೇ ಅಲ್ಲ. **ಪರಿಗಣನೆಯೆನು**-ಪರಿಮಿತಯುಕ್ತವಾದ ಗಣನೆಕೂಡ ಮಾಡಬಹುದು. ("ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿ ಮಮೇ ರಜಾಂಸಿ" (ಋ ೧!೧೫೪/೧) ಎಂಬ ವಿಷ್ಣುಸೂಕ್ತ ಮಂತ್ರದಲ್ಲಿ ಹೇಳಿದ ಅರ್ಥವನ್ನೇ ಇಲ್ಲಿ ಸಂಗ್ರಹಿಸಿದ್ದಾರೆ). ಅದು ಹ್ಯಾಂಗೆಂದರೆ ಸಪ್ತಸಮುದ್ರ-ಗಳಿಗೆ ಭೂಮಿಗೆ ಯೋಜನ ಪರಿಮಿತ ಸಂಖ್ಯಾದಿಂದ ಅಂತ ಅದೆ. ಆದ್ದರಿಂದ ಪರಮಾಣು ಕಣಗಳ ಅಂತ (ಕೊನೆ) ಕಾಣಬಹುದು—ಲಕ್ಷ್ಮ್ಯಾದಿಗಳಿಂದ ಎಂತ ತಾತ್ಪರ್ಯ. **ಮಾಧವನ**-ಶ್ರೀಲಕ್ಷ್ಮೀಪತಿಯ, **ಆನಂದಾದಿ ಗುಣಂಗಳ**-ದೋಷ-ರಹಿತ ಜ್ಞಾನಾನಂದಾದಿ ಅನಂತಾನಂತ ಗುಣಗಳನ್ನ ಎಣಿಸಲಿಕ್ಕೆ ರಮಾಬ್ರಹ್ಮಾದಿ-ಗಳಿಂದಲೂ ಶಕ್ಯವಲ್ಲ. ಯಾಕೆಂದರೆ ಪರಮಾತ್ಮ ಅಪರಿಚ್ಛಿನ್ನ, ಅವನ ಗುಣಗಳೂ ಅಪರಿಚ್ಛಿನ್ನ. ರಮಾಬ್ರಹ್ಮಾದಿಗಳು ಪರಿಚ್ಛಿನ್ನಗುಣೋಪೇತರಾದ್ದರಿಂದ ಗಣನೆ ಮಾಡಲಾರರು. ಪರಮಾತ್ಮನ ಸದೃಶ ಅಪರಿಚ್ಛಿನ್ನ ಅನ್ಯರು ದಾರೂ ಇಲ್ಲ. ಆದ್ದರಿಂದ ದಾರೂ ಗಣನೆ ಮಾಡಲಾರರು. **ಅನಾದಿ ಕಾಲದಲ್ಲಿ**-ಆದಿರಹಿತವಾದ ಕಾಲದಾರಭ್ಯ ಏತತ್ ಕ್ಷಣ ಪರ್ಯಂತ ಅವನ ಗುಣಗಳ ಗಣನೆ ಮಾಡಿದವರೇ ಇಲ್ಲ. ಆದ್ದರಿಂದ ಅನಾದಿಕಾಲದಿಂದ ಪರಮಾತ್ಮನು ಅಗಣಿತಗುಣವುಳ್ಳವನು ಎಂಬೋದು

ದಾವದದೆ ಅದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ. ಇದನ್ನ ಯಾಕೆ ಹೇಳ ಬೇಕೆಂದರೆ ತಾರತಮ್ಯಾನುಸಾರ ಅಲ್ಪಗುಣೋಪೇತನಾದವನು ನಾನು, ರಮಾದಿ-ಗಳು; ಪೂರ್ಣಗುಣೋಪೇತನಾದವ ಪರಮಾತ್ಮ, ಅವನ ಅಧೀನ ಗುಣೋ-ಪೇತನಾದವನು ನಾನು ಎಂಬ ಜ್ಞಾನಾನುಸಾರ ಧ್ಯಾನಕ್ಕೆ ಬಂದು, ಅವನಿಂದ ಕೊಡಲ್ಪಟ್ಟ ಲಾಭಾಲಾಭಗಳು ದೂರಮಾಡುವುದಕ್ಕೆ ಶಕ್ಯಸಲ್ಲವೆಂತಲೂ, ಅವನಿಂದ ಕೊಡಲ್ಪಟ್ಟ ಸುಖವೋ ದುಃಖವೋ ಅಸೂಯಾರಹಿತವಾಗಿ ಭೋಗಿಸಿಯೇ ತೀರ-ಬೇಕು, ಬಿಡಲಾರದು ಎಂತಲೂ ದ್ವಂದ್ವ (ರಾಗ-ದ್ವೇಷ, ಸುಖ-ದುಃಖ=ದ್ವಂದ್ವ) ಸಹನನಾಗಿ ಪರಮಾತ್ಮನನ್ನೇ ಸ್ಮರಿಸುತ್ತ ಇರೋ ನಿಮಿತ್ತ, ಅಗಣಿತಗುಣವುಳ್ಳ ಪರ ಮಾತ್ಮನು ಅಗಣಿತಗುಣವುಳ್ಳವ ಎಂಬ ಭಾವದಿಂದ ಇರುವುದೇ ಬದುಕಿದ್ದಕ್ಕೆ ಫಲ.

(ಗು) ಭೂಮಿಯಲ್ಲಿದ್ದ ಪರಮಾಣುಗಳ, ಅಂಬುಕಣಂಗಳ-ಮೇಘರಾಜ ಗರಿಯೋ (ಸುರಿಸುವ) ಮಳೆಹನಿಗಳನ್ನು, ನೈದಬಹುದು-ಪರಿಗಣನೆ ಮಾಡಬಹುದು. ಮಾಧವನ-ರಮಾಪತಿಯ, ಆನಂದಾದಿ ಗುಣಂಗಳು-ಪರಿಮಿತರಹಿತವಾದಂತ ಅನಂತಾನಂತ ಗುಣಗಳು, ಅನಾದಿಕಾಲದಿ ಅಗಣಿತವೆಂಬುದೆ-ಎಂದು ತಿಳಿದು ಕೊಂಡಾಡುವುದೇ ಫಲವಿದು ಬಾಳ್ದುದಕೆ.

ಮೇದಿನಿ-ಭೂಮಿ. ಅಂಬು-ನೀರು. ಅಂಬುಕಣಂಗಳನು-ಸಮುದ್ರ ದಲ್ಲಿರುವ ನೀರಿನ ಹನಿಗಳನ್ನು. ಪರಿಗಣನೆಯನು-ಎಣಿಕೆಯನ್ನು ಪರಿಗಣನೆಯನು ಐದಬಹುದು-ಗಣನೆ ಮಾಡಬಹುದು, ಎಣಿಸಬಹುದು, ಮಾ-ಧವನ-ಲಕ್ಷ್ಮೀ-ಪತಿಯಾದ ನಾರಾಯಣನ, ಅನಾದಿಕಾಲದಿಂದ-ಎಂದೆಂದೂ, ಅಗಣಿತ-ಎಣಿಸಲು ಸಾಧ್ಯವಿಲ್ಲ.

(ಘೀ) ಗುಣಂಗಳು ......ಅಗಣಿತ ಎಂಬಲ್ಲಿ—'ವಿಷ್ಣೋರ್ನು ವೀರ್ಯ-ಗಣನಾಂ ಕತಮೋಽರ್ಹತೀಹ । ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ॥" ಎಂದು ಭಾಗವತದಲ್ಲಿ (೨ ಸ್ಕಂ. ೭ ಅ, ೪೦ ಶ್ಲೋ) ಹೇಳಿದಂತೆ 'ಚಾಣಾಕ್ಷನಾದವನು (ಕವಿಃ) ಪೃಥ್ವಿಯಲ್ಲಿರುವ ಧೂಳಿನ ಕಣಗಳನ್ನಾದರೂ ಎಣಿಸಿ ಯಾನು, ಆದರೆ ವಿಷ್ಣುವಿನ ಅನಂತಾನಂತ ಗುಣಗಳನ್ನು ಎಣಿಸಲು ಯಾರಿಗೆ ತಾನೇ ಸಾಧ್ಯವಾದೀತು?' ಎಂಬಲ್ಲಿಯೂ ['ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ' ಎಂಬ ಋಗ್ವೇದದಲ್ಲೂ (೧ ಮಂ. ೧೫೪ ಸೂ. ೧ ಮಂ., ? ೨ ಅಷ್ಟ. ೨ ಅಧ್ಯಾ. ೨೪ ವರ್ಗ)] ಹೇಳಿದ ಪ್ರಮೇಯವು ಇಲ್ಲಿ ಸಂಗ್ರಹೀತವಾದಿದೆ.

**ವರಗಾಯತ್ರೀನಾಮಕ ಹರಿ ಗೀ ।**
**ರೆರಡಂಘ್ರಿಗಳ ವಿವರವ ತಿಳಿದು ॥**
**ತರುವಾಯದಿ ಷಡ್ವಿಧ ರೂಪವ ಸಾ ।**
**ದರದಲಿ ಧೇನಿಸಿ ನಿರುತ ಜಪಿಸುವದೆ (ಅನುದಿನದಿ ಧ್ಯಾನಿಸುತಿಪ್ಪುದೆ)**
**॥೧೫॥**

**ವರಗಾಯತ್ರೀ**—'ವೇದಮಾತಾ ಚ ಗಾಯತ್ರೀ' ಎಂಬ ಪ್ರಮಾಣದಿಂದ ಗಾಯತ್ರೀಮಂತ್ರಕ್ಕೆ ವರತ್ವ, ಶ್ರೇಷ್ಠತ್ವ ಬಂತು. ವೇದಕ್ಕೆ ಗಾಯತ್ರೀ ಮಾತಾ ಹ್ಯಾಂಗೆ ಆಯಿತು ? ವೇದ ಪೌರುಷೇಯವಾಯಿತಲ್ಲ ಎಂದರೆ ವೇದಕ್ಕೆ ಉತ್ಪತ್ತಿ ಇಲ್ಲ. ವೇದಕ್ಕೆ ಗಾಯತ್ರೀ ದ್ವಾರಾ ಅಭಿವ್ಯಕ್ತಿ ಅಷ್ಟೆ, ನಾರಾಯಣ-ರೂಪದಿಂದ ವಾಸುದೇವಾದಿ ರೂಪಗಳು ಅಭಿವ್ಯಕ್ತಿಯೋಪಾದಿಯಲ್ಲಿ ಎಂತ ತಾತ್ಪರ್ಯ. ಈ ರೀತ್ಯಾ ಗಾಯತ್ರೀಗೆ 'ವರತ್ವ' ಸಿದ್ಧಿ ಮತ್ತು ಇತರ ಮಂತ್ರಾಪೇಕ್ಷಯಾ ಗಾಯತ್ರೀಮಂತ್ರ ಶ್ರೇಷ್ಠ ಎಂತಲೂ ತಾತ್ಪರ್ಯವೇ. ಏತಾದೃಶವಾದದ್ದು ಗಾಯತ್ರೀ ಮತ್ತು ಗಾಯತ್ರೀನಾಮಕ ಪರಮಾತ್ಮ, ಸರ್ವದೇವತೆಗಳಿಗಿಂತಲೂ. ರಮಾದೇವೇರಕಿಂತಲೂ 'ಪರ' ಶಬ್ದದಿಂದ ಉತ್ತಮವಾದ ಎಂತಲೂ ತಾತ್ಪರ್ಯವೆ.

**ವರಗಾಯತ್ರೀ ನಾಮಕ**—ಉತ್ತಮವಾದ ಗಾಯತ್ರೀನಾಮಕ ಹ್ಯಾಂಗೆ ಅಂದರೆ ಗಾಯತ್ರೀ ಅಂತರ್ಗತನಾಗಿ, ಗಾಯತ್ರೀ ವಾಚ್ಯನಾಗಿ, ಗಾಯತ್ರೀ ಮಂತ್ರದ್ವಾರಾ ಪಾಪಗಳನ್ನು ಪರಿಹಾರ ಮಾಡತಾನಾದ್ದರಿಂದ 'ಹರಿ' ಎಂತಲೂ ಹೆಸರು ಬರೋದಾಯಿತು, ಇಂಥ ಹರಿಗೆ, **ಈರೆರಡಂಘ್ರಿಗಳ**—ನಾಲ್ಕು ಪಾದಗಳ, ವಿವರಗಳನ್ನು ತಿಳಿದು-ಏತಾದೃಶವಾದದ್ದೆಂದು ತಿಳಿದು **ತರುವಾಯದಿ**—ಹೀಗೆ ತಿಳಿದನಂತರ, **ಷಡ್ವಿಧ**—ಆರು ವಿಧ ರೂಪಗಳು, ಅವುಗಳು ಅಂದರೆ ಆ ಆರು ರೂಪಗಳನ್ನ, **ಸಾದರದಲಿ**—ಆದರದಿಂದ ಧ್ಯಾನ ಮಾಡೋಣ ಕರ್ತವ್ಯ.

**ಇದರ ವಿವರಗಳು :**— ಸರ್ವೋತ್ತಮ ಹರಿಗೆ ಅಧಿಷ್ಠಾನಭೂತವಾದದ್ದು ಗಾಯತ್ರ್ಯಾತ್ಮಕ ಚತುರ್ವಿಂಶತಿ ವರ್ಣಗಳು. ಈ ಇಪ್ಪತ್ತುನಾಲ್ಕು ವರ್ಣಗಳೇ ಕರಚರಣಾದಿ ಅವಯವಯುಕ್ತವಾದ ಪ್ರತೀಕತ್ವೇನ ಮನಸಾ ಮಾನಸ ಪ್ರತೀಕವನ್ನು ನಿರ್ಮಾಣಮಾಡಿ ಹೃದಯದಲ್ಲಿ ಚಿಂತಿಸಬೇಕು. 'ವರಗಾಯತ್ರೀನಾಮಕ ಹರಿ' ಎಂಬ ಉಕ್ತಿಗೆ ಶೇಷಪೂರ್ತಿ ಪೂರ್ವೋಕ್ತ ಪ್ರಕಾರ ಅವಯವರೂಪವಾದ ಪ್ರತೀಕತ್ವೇನ ಅನುಸಂಧಾನ ಮಾಡಬೇಕೆಂಬ ತಾತ್ಪರ್ಯ. ವರ್ಣಗಳಿಂದಲೇ ಕರಚರ-ಣಾದಿ ಅವಯವಯುಕ್ತವಾದ ಪ್ರತೀಕ ಹ್ಯಾಂಗೋ, ಲೋಕದಲ್ಲಿ ದೇಹನಿರ್ಮಾಣ ಚತುರ್ವಿಂಶತಿ ತತ್ವಗಳಿಂದ ಹ್ಯಾಂಗೋ ಹಾಂಗೆ ಚತುರ್ವಿಂಶತಿ ವರ್ಣಗಳಿಂದ ಯುಕ್ತ

ವಾದದ್ದು. ಗಾಯತ್ರಿಯ ಈ ಇಪ್ಪತ್ತುನಾಲ್ಕು ಅಕ್ಷರಗಳು ಇಪ್ಪತ್ತುನಾಲ್ಕು ತತ್ತ್ವಸಾಂಕೇತಗಳು. ಈ ಸಾಂಕೇತವನ್ನು ಅನುಸರಿಸಿ ಹನ್ನೊಂದು ವರ್ಣಗಳು-ಹನ್ನೊಂದು ಇಂದ್ರಿಯಗಳು (ಮನಸಹಿತ ದಶೇಂದ್ರಿಯಗಳು.) (ತತ್ ಎಂದಾರಂಭಿಸಿ 'ದೇವಸ್ಯ' ಎಂಬಲ್ಲಿರುವ 'ದೇ' ವರೆಗಿನ ಹನ್ನೊಂದು ವರ್ಣಗಳು) ಪಂಚ ಮಹಾಭೂತಗಳು—ಐದು ವರ್ಣಗಳು (ವಸ್ಯ ಧೀಮಹಿ ಎಂಬ ಐದು ವರ್ಣಗಳು) ಐದು ತನ್ಮಾತ್ರಗಳು. (ಧಿಯೋ ಯೋ ನಃ ಪ್ರ ಎಂಬ) ಐದು ವರ್ಣಗಳು ಒಂದು ವರ್ಣ(ಚೋ) ಅಹಂಕಾರ ತತ್ತ್ವ ಒಂದು ವರ್ಣ(ದ) ಮಹತ್ ತತ್ತ್ವ, ಒಂದು ವರ್ಣ (ಯಾತ್) ಅವ್ಯಕ್ತ ತತ್ತ್ವ-ಹೀಗೆ ಇಪ್ಪತ್ತನಾಲ್ಕು ವರ್ಣಗಳು ಇಪ್ಪತ್ತನಾಲ್ಕು ತತ್ತ್ವಗಳೆಂದು ಪ್ರತಿಮಾತ್ವೇನ ಚಿಂತಿಸಬೇಕು, ಹೀಂಗೆ ಹರಿಗೆ ವರ್ಣಾತ್ಮಕ ಚತುರ್ವಿಂಶತಿ ರೂಪಗಳೊಂದೊಂದರಲ್ಲಿ ಒಂದೊಂದು ರೂಪದ ಮೇರೆಗೆ ಕೇಶವಾದಿ ಇಪ್ಪತ್ತನಾಲ್ಕು ಭಗವದ್ರೂಪಗಳು ಖಂಡರೂಪದಿಂದ ಇರೋದಾಗಿವೆ. ಇಂಥಾ ಪ್ರತೀಕದಲ್ಲಿ ತದಾಕಾರ ಗಾಯತ್ರೀ ರೂಪ ಒಂದು, ತದ್ಗತ ಹೃದಯಸ್ಥ ಹರಿರೂಪ ಒಂದು, ಈ ಎರಡನ್ನೂ ತಿಳಿಯಬೇಕು. ಇದು 'ವರಗಾಯತ್ರೀನಾಮಕ ಹರಿ' ಎಂಬುದರ ಅರ್ಥ. ಈರೆರಡು ರೂಪದಲಿ—ಈರ-ವಾಯುದೇವರು, ಪೂರ್ವೋಕ್ತ ಇಪ್ಪತ್ತನಾಲ್ಕು ತತ್ತ್ವಗಳ ಪ್ರತೀಕ. ಆಕಾರ ಅಖಂಡರೂಪ, ಹೃದಯಸ್ಥ ರೂಪ ಒಂದು. ಈರಸಾಂಕೇತನಾದ ಭಾರತೀರಮಣ ಮುಖ್ಯಪ್ರಾಣಾಂತರ್ಗತಗಳಾಗಿ ತಿಳಿಯಬೇಕು. ಎರಡಂಘ್ರಿಗಳಿಗೆ = ಗಾಯತ್ರೀವಾಚ್ಯನಾದ ಪರಮಾತ್ಮನಾದವನ ಎರಡು ಪಾದಗಳು. ಇವುಗಳಿಂದ ಆರಂಭಮಾಡಿ 'ವಿವರವ ತಿಳದು' ಪೂರ್ವೋಕ್ತ ಪ್ರಕಾರ ಅವಯವಗಳ ವಿವರಗಳ ತಿಳದು, ಹಾಂಗೆ ಧ್ಯಾನಮಾಡತಕ್ಕ ವಿವರಗಳನ್ನು ತಿಳಿದವನಾಗಿ ಧ್ಯಾನಮಾಡಬೇಕೆಂದು ತಾತ್ಪರ್ಯ. ತರುವಾಯದಿ-ಪೂರ್ವೋಕ್ತ ಪ್ರಕಾರ ಚಿಂತನೆಮಾಡಿದ ತರುವಾಯ, ಷಡ್ವಿಧ—ಆರು ರೂಪಗಳನ್ನು (ಐದು ಜ್ಞಾನೇಂದ್ರಿಯಗಳು + ಒಂದು ಮನಸ್ಸು) ಗಾಯತ್ರ್ಯಾತ್ಮಕ ಪ್ರತೀಕದ ಆರು ಸ್ಥಾನಗಳಲ್ಲಿ ಆರು ಭಗವದ್ರೂಪಗಳನ್ನು [1] ಪ್ರತ್ಯೇಕ ರೂಪಗಳೆಂದು ಚಿಂತಿಸಿ ಆದರದಿಂದ ಧ್ಯಾನಮಾಡಿ ನಿರಂತರ ಗಾಯತ್ರೀಮಂತ್ರ ಜಪಿಸುವದೇ ಬದುಕ್ಕಿದಕ್ಕೆ ಫಲ. ಭೂಃ ಭುವಃ ಸ್ವಃ ಎಂಬುದು ವ್ಯಾಹೃತಿ. ಇದು ಒಂದು ಪಾದ, ಗಾಯತ್ರಿಯದು ಮೂರು ಪಾದ. ಹೀಂಗೆ ನಾಲ್ಕು ಪಾದ, ಈರೆರಡು-ನಾಲ್ಕು,

---

1 (i) ಗಾಯತ್ರಿಯಲ್ಲಿಯ ವಿಷ್ಣುವಿನ ಸ್ತ್ರೀರೂಪ (ii) ಮತ್ಸ್ಯಾದಿ ಅವತಾರಗಳಲ್ಲಿಯ 'ಭೂತ' ನಾಮಕನು. (iii) ಹಯಗ್ರೀವ ದೇವರ 'ವಾಕ್' ನಾಮಕ ಸ್ತ್ರೀರೂಪ (iv) ಪೃಥ್ವೀರೂಪ (v) ಜೀವರ ಜಡ ಹೃದಯದಲ್ಲಿಯ 'ಶರೀರ'ನಾಮಕರೂಪ ಮತ್ತು (vi) ಜೀವರ ಸ್ವರೂಪದೇಹದ ಹೃದಯದಲ್ಲಿಯ 'ಹೃದಯ'ನಾಮಕರೂಪ, ಇವು ಛಾಂದೋಗ್ಯ ಭಾಷ್ಯ-೩-೫ರಲ್ಲಿ ಹೇಳಿದ ಷಡ್ವಿಧ ರೂಪಗಳೆಂದೂ ತಿಳಿಯಬೇಕು.

ಅಂಘ್ರಿಗಳು = ಪಾದ, ಗಾಯತ್ರೀ ನಾಲ್ಕು ಪಾದ ಎಂತ ಸಾಂಕೇತ 2 (i) ಭೂಃ ವರ್ಣದಿಂದ ಭೂಲೋಕ ಸಾಂಕೇತ. ಋಗ್ವೇದವೂ ಸಾಂಕೇತ. (ii) ಭುವಃ = ಭುವರ್ಲೋಕ ಯಜುರ್ವೇದ ಸಾಂಕೇತ, (iii) ಸ್ವಃ = ಸ್ವರ್ಗಲೋಕ ಸಾಮ-ವೇದ ಸಾಂಕೇತ ಮತ್ತು (iv) ಗಾಯತ್ರೀ ನಾಲ್ಕನೆಯ ಪಾದ, ಹೀಗೆ ದ್ಯೋತನ ಮಾಡತವೆ, ಗಾಯತ್ರೀ ಪ್ರತೀಕದಲ್ಲಿ ಕಟಿ ಪ್ರದೇಶದಲ್ಲಿ ಭೂಃ ಎಂಬಕ್ಷರವು ಭೂಲೋಕ-ಋಗ್ವೇದ (ಇತ್ಯಾದಿ ಮೇಲೆ ಹೇಳಿದಂತೆ) ಚಿಂತಿಸಬೇಕು. ವ್ಯಾಹೃತಿ ಉಚ್ಚಾರದಿಂದ ವೇದತ್ರಯಗಳ ಉಚ್ಚಾರ ಮಾಡಿದ ಫಲ ಬರತದೆ, ಓಂಕಾರವು ಗಾಯತ್ರೀವಾಚ್ಯ ಹರಿಗೆ ಶಿರವೆಂದು ಚಿಂತಿಸಬೇಕು. ವೇದತ್ರಯದಿಂದ ವ್ಯಾಹೃತಿ ವರ್ಣಗಳೇ ಉತ್ಪತ್ತಿ ಎಂತ ಶ್ರುತ್ಯಂತರದಲ್ಲಿ ಹೇಳತದೆ. ಈ ಪ್ರಕಾರ ಗಾಯತ್ರೀ ರೂಪ (ನಾಮ) ವಿಶೇಷಗಳನ್ನು ತಿಳಿಯಬೇಕು ಮತ್ತು ಧ್ಯಾನಮಾಡಬೇಕೆಂದು ತಾತ್ಪರ್ಯ, ಹೀಂಗೆ ಮಾಡುವದೆ ಬದುಕಿದ್ದಕ್ಕೆ ಫಲ, ಅಲ್ಲದೆ ಗಾಯತ್ರೀ ಮಂತ್ರ ಜಪಿಸುವದರಿಂದ ಪರಿಹಾರವಾಗುವ ಪಾಪಗಳ ವಿವರ ಮುಂದೆ ಕೊಟ್ಟಿದೆ,

| ವರ್ಣ (ಅಕ್ಷರ) | ಭಗವದ್ರೂಪ ಗಳ ಬಣ್ಣ | ಭಗವಂತನ ನಾಮಗಳು | ಅಭಿಮಾನಿಗಳು | ಪರಿಹಾರವಾಗುವ ಪಾಪಗಳ ವಿವರ |
|---|---|---|---|---|
| 1 | 2 | 3 | 4 | 5 |
| ೧ ಅ | ಶ್ವೇತ ವರ್ಣ | ವಿಶ್ವ | ಶ್ರೀದೇವಿ | ಕಣ್ಣಿನಿಂದಾಗುವ ಪಾಪಗಳು |
| ೨ ಉ | ಪೀತವರ್ಣ | ತೈಜಸ | ಭೂದೇವಿ | " |
| ೩ ಮ | ಲೋಹಿತ | ಪ್ರಾಜ್ಞ | ದುರ್ಗಾ | " |
| ೪ ಭೂಃ | ಸ್ವರ್ಣ | ಸಂಕರ್ಷಣ | ಪ್ರಾಣ | ಭೂಲೋಕ—ಋಗ್ವೇದ ಅಧೀನ ಅನಾಚಾರ— ದೋಷ ಪರಿಹಾರ |

2 "ಸಾ ಏಷಾ ಚತುಷ್ಪದಾ ಷಡ್ವಿದಾ ಗಾಯತ್ರೀ ತದೇತತ್ ಋಚಾಭ್ಯನೂಕ್ತಃ" ಛಾಂದೋಗ್ಯ। ಇತರ ಭಾಷ್ಯ ಭಾಗದಲ್ಲಿ. ...."ಗಾಯತ್ರೀನಾಮಕೋ ವಿಷ್ಣುಃ ಚತುಷ್ಪಾತ್...... ಭಿನ್ನಪಾದಾಃ ಸರ್ವಜೀವಾಃ.......। ಸ್ವರೂಪ ಪಾದಾ ವಿಷ್ಣೋಸ್ತು ತ್ರಯೋ ಹಿ ದಿವಿ ಸಂಸ್ಥಿತಾ । ನಾರಾಯಣ ವಾಸುದೇವ ವೈಕುಂಠ ಇತಿ ತೇ ತ್ರಯಃ ।" ಎಂದು ಗಾಯತ್ರೀ ನಾಮಕ ಹರಿಯ ನಾಲ್ಕು ಪಾದಗಳೆಂದಿದ್ದಾರೆ. ಇದನ್ನೇ "ತ್ರಿಪಾದಸ್ಯಾಽಮೃತಂ ದಿವಿ ॥ ಪಾದೋಽಸ್ಯ ವಿಶ್ವಾ ಭೂತಾನಿ" ಎಂದು ಪುರುಷಸೂಕ್ತದಲ್ಲಿಯೂ ಹೇಳಿದೆ. ಮತ್ತು ಅಷ್ಟಾಕ್ಷರಮಂತ್ರ ಮುಂತಾದ ಅಷ್ಟಮಹಾಮಂತ್ರಗಳಲ್ಲಿಯ ಗಾಯತ್ರೀ ಮಂತ್ರವು ವ್ಯಾಹೃತಿಯಿಂದ ರಹಿತವಾದದ್ದು. ಆದರೂ ಅಲ್ಲಿಯೂ ಸಹ ಓಂ ಎಂದು ಒಂದು ಪಾದ, ತತ್ಸವಿತುರ್ವರೇಣ್ಯಂ ಇತ್ಯಾದಿ ಮೂರು ಪಾದಗಳು. ಹೀಗೆ ಓಂಕಾರ ಸಹಿತವಾದ ಗಾಯತ್ರೀ ಮಂತ್ರವು ನಾಲ್ಕು ಪಾದಗಳುಳ್ಳವೆಂದು ತಿಳಿಯಬೇಕು.

| 1 | 2 | 3 | 4 | 5 |
|---|---|---|---|---|
| ೫ ಭುವಃ | ಪೀತ | ಪ್ರದ್ಯುಮ್ನ | ಅಪಾನ | ಭುವರ್ಲೋಕ-ಯಜುರ್ವೇದ ಅನಾಚಾರ ದೋಷ |
| ೬ ಸ್ವಃ | ನೀಲ | ಅನಿರುದ್ಧ | ವ್ಯಾನ | ಸ್ವರ್ಗಲೋಕ-ಸಾಮವೇದ ಅನಾಚಾರ ದೋಷ |
| ೭ ತ | ಪದ್ಮ | ಕೇಶವ | ಬ್ರಹ್ಮ | ಬ್ರಹ್ಮಹತ್ಯಾದಿ ಪಾಪ-ಪರಿಹಾರ |
| ೮ ತ್ | ಶ್ವೇತ | ನಾರಾಯಣ | ಅಹಂಕಾರ ಪ್ರಾಣ | ಗೋಹತ್ಯಾದಿ ಪಾಪ-ಪರಿಹಾರ |
| ೯ ಸ | ಲೋಹಿತ | ಮಾಧವ | ಶಂಕರ | ಪರಸ್ತ್ರೀ ಗಮನ ಪಾಪ-ಪರಿಹಾರ |
| ೧೦ ವಿ | ಕಜ್ಜಲ | ಗೋವಿಂದ | ದೇವೇಂದ್ರ | ಸುವರ್ಣಹರಣ ಪಾಪ-ಪರಿಹಾರ |
| ೧೧ ತೃ | ರಕ್ತ | ವಿಷ್ಣು | ಗಣೇಶ | ಪರದಾರಗಮನ-ಪಾಪಪರಿಹಾರ |
| ೧೨ ವ | ನೀಲ | ಮಧುಸೂದನ | ಆದಿತ್ಯ | ಗುರು ಅಂಗನಾದಿಗಮನ ” |
| ೧೩ ರೇ | ಕ್ಷೀರ | ತ್ರಿವಿಕ್ರಮ | ಪಾರ್ವತೀ | ಅಭಕ್ಷಣಭಕ್ಷಣ ” |
| ೧೪ ಣ್ಯಂ | ಸ್ವರ್ಣ | ವಾಮನ | ಧರಣೀಧರಶೇಷ | ಶುದ್ಧ ಅನ್ನಾದಿನಿಂದಾ ” |
| ೧೫ ಭ | ಕೇತಕೀ | ಶ್ರೀಧರ | ಪ್ರಜಾಪತಿ | ಶುದ್ಧ ಜ್ಞಾನ ಅಜ್ಞಾನದಿಂದ ದೂಷಣೆ ಪರಿಹಾರ |
| ೧೬ ಗೋಃ | ಕಾಂಚನ | ಹೃಷೀಕೇಶ | ಬುಧ | ಗುರುನಿಂದಾ ” |
| ೧೭ ದೇ | ವ ...? | ಪದ್ಮನಾಭ | ಶನಿ | ಅನೇಕ ” |
| ೧೮ ವ | ಶ್ವೇತ | ದಾಮೋದರ | ಗುರು | ಪಶುಗಳ ಹತ್ಯಾ |
| ೧೯ ಸ್ಯ | ತಾಮ್ರ | ಸಂಕರ್ಷಣ | ನಾರ್ಯಣ ಅರ್ಯಮಾಣ | ತೀರ್ಥನದಿಗಳಲ್ಲಿ ಮಾಡಿದ ” |
| ೨೦ ಧೀ | ಮೇಘ | ವಾಸುದೇವ | ಜಮದಗ್ನಿ | ಮಾರ್ಗ ನಡೆಯುವಾಗ ” |
| ೨೧ ಮ | ಸ್ವರ್ಣ | ಪ್ರದ್ಯುಮ್ನ | ಕಾಮ | ಅಪದ್ಧ ಸಾರಿಸಿದ ” |
| ೨೨ ಹಿ | ತಾಮ್ರ | ಅನಿರುದ್ಧ | ಧರ್ಮ | ಬ್ರಾಹ್ಮಣಾದಿ ನಾನಾ ಸ್ತ್ರೀಗಮನ ” |
| ೨೩ ಧಿ | ಗೌರ | ಪುರುಷೋತ್ತಮ | ಮನು | ಸಜ್ಜನರ ನಿಂದಾಮಾಡಿದ ” |

| 1 | 2 | 3 | 4 | 5 | |
|---|---|---|---|---|---|
| ೨೪ ಯೋ | ತಿಲ | ಅಧೋಕ್ಷಜ | ಪಿತೃದೇವತೆ | ಸತ್ಕರ್ಮ ದುಷ್ಕರ್ಮ ಜನಿತ | " |
| ೨೫ ಯೋ | ಧೂಮ್ರ | ನಾರಸಿಂಹ | ವಾಯು | ಮನಸ್ಸಿನಿಂದ ಮಾಡಿದ | " |
| ೨೬ ನಃ | ರಕ್ತ | ಅಚ್ಯುತ | ಈಶಾನ್ಯ | ಜಲಪಾನಕೃತ | " |
| ೨೭ ಪ್ರ | ವಾರುಣ್ಯ | ಜನಾರ್ಧನ | ಮನ್ಮಥ | ಮದ್ಯಾದಿಗಳ ಪಾನ | " |
| ೨೮ ಚೋ | ಶ್ವೇದ | ಉಪೇಂದ್ರ | ಲಕ್ಷಣ | ಉತ್ಥಾನಕೃತ | " |
| ೨೯ ದ | ಶಂಖ | ಹರಿ | ದಾಸವ್ಯಾಸ | ನಾನಾಯೋನೀಕೃತ | " |
| ೩೦ ಯಾತ್ | ರಕ್ತ | ಶ್ರೀಕೃಷ್ಣ | ಅನಿರುದ್ಧ | ಸರ್ವ ಪಾಪಪರಿಹಾರ | |

ಷಡ್ವಿಧ ರೂಪಗಳ ವಿವರ :— ತ್ರಿಪದಾ ಗಾಯತ್ರೀ ತ್ರಿಪದ ವಿವರ

೧. ತತ್ ಸವಿತೃವರೇಣ್ಯಂ-ಅಷ್ಟಾಕ್ಷರ ಪ್ರತಿಪಾದ್ಯ ಸರ್ವಲೋಕನಿಯಾಮಕ ಅನಿರುದ್ಧ.

೨. ಭರ್ಗೋ ದೇವಸ್ಯ ಧೀಮಹಿ–ಸರ್ವಶಬ್ದ ಪ್ರತಿಪಾದ್ಯ ಪ್ರದ್ಯುಮ್ನ

೩. ಧಿಯೋ ಯೋ ನಃ ಪ್ರಚೋದಯಾತ್– ಸರ್ವಜೀವ ನಿಯಾಮಕ ಸಂಕರ್ಷಣ.

| ಷಡ್ವಿಧ | ರೂಪಗಳು |
|---|---|
| ೧. ತತ್ಸವಿತುಃ | ಸ್ತ್ರೀರೂಪ ಹಯಶೀರ್ಷ |
| ೨. ವರೇಣ್ಯಂ(ಣಿಯಂ) | ಅನಂತಾನಂತ ಅವತಾರ ವಿಶಿಷ್ಟ ರೂಪಗಳು |
| ೩. ಭರ್ಗೋ ದೇವಸ್ಯ | ಹಯಗ್ರೀವರೂಪ |
| ೪. ಧೀಮಹಿ | ಪೀತವರ್ಣ ಹಯಗ್ರೀವ |
| ೫. ಧಿಯೋ ಯೋ ನಃ | ಶರೀರನಾಮಕ ಪರಮಾತ್ಮರೂಪ |
| ೬. ಪ್ರಚೋದಯಾತ್ | ಜೀವನಾಮಕ ಪರಮಾತ್ಮರೂಪ |

ಈ ಪ್ರಕಾರ ಗಾಯತ್ರೀನಾಮಕ ಪರಮಾತ್ಮನನ್ನು ಧ್ಯಾನಮಾಡಬೇಕೆಂಬ ಅರ್ಥ ಪ್ರಕಾರಾಂತವಾಗಿ ಗಾಯತ್ರಿಯ ಅನುಸಂಧಾನ ಕ್ರಮವಿಂತಿದೆ.

(೧) ಓಂ....ಓಂ ಪ್ರಣವಸ್ಯ ಭಗವಾನ್ ಋಷಿಃ, ಗಾಯತ್ರೀ ಛಂದಃ ಅನಂತ ಗುಣಪರಿಪೂರ್ಣ ನಾರಾಯಣೋ ದೇವತಾ (ಇದಕ್ಕೆ ಅಧಿಕಾರಿಗಳು ಬ್ರಹ್ಮದೇವರು ಮಾತ್ರವೆಂದು ಶ್ರೀ ಮಧ್ವಾಚಾರ್ಯರ ಭಾಷ್ಯವಾಕ್ಯವನ್ನು ಉದಾಹರಿಸಿ ಹೇಳ ಲಾಗಿದೆ) [ಓಂಕಾರಕ್ಕೆ ಭಗವಂತನೇ ಋಷಿ. ಗಾಯತ್ರೀ ಛಂದಸ್ಸು, ದೇವತಾ

ಅನಂತಗುಣಪರಿಪೂರ್ಣನಾದ ನಾರಾಯಣನೇ ಓಂಕಾರಾಂತರ್ಗತ, ಓಂಕಾರವಾಚ್ಯ, ಓಂಕಾರ ಪ್ರತಿಪಾದ್ಯನೆಂದು ಅನುಸಂಧಾನ ಮಾಡಬೇಕು.]

(೨) ಭೂರ್ಭುವಸ್ವಃ—ಭೂರಾದೀನಾಂ ತಿಸೃಣಾಂ ಅಪಿ ವ್ಯಾಹೃತೀನಾಂ, ಅವಿಶೇಷೇಣ ಬ್ರಹ್ಮಾ ಋಷಿಃ ಗಾಯತ್ರೀ ಛಂದಃ। ಉದ್ಯದಾದಿತ್ಯವರ್ಣೋ ಜ್ಞಾನಅಭಯಮುದ್ರಾಯುತ ಹಸ್ತದ್ವಯೋ ಭಗವಾನ್ ಶ್ರೀಹರಿಃ ದೇವತಾ। ಭೂಃ, ಭುವಃ, ಸ್ವಃ ಈ ಮೂರರಿಂದ ಕೂಡಿದ ವ್ಯಾಹೃತಿಗೆ(ವ್ಯಾಹೃತಿ ಸಮೂಹಕ್ಕೆ) ಬ್ರಹ್ಮದೇವರು ಋಷಿ, ಗಾಯತ್ರೀ ಛಂದಸ್ಸು. ಆದೇ ಉದಯಿಸಿದ ಸೂರ್ಯನ ಕಾಂತಿಯೋಪಾದಿಯಲ್ಲಿ ಕಾಂತಿಯುಕ್ತನಾದ ಜ್ಞಾನ ಅಭಯಯುಕ್ತನಾದ ಹಸ್ತದ್ವಯ ವುಳ್ಳ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮ ದೇವತೆಯನ್ನು ವ್ಯಾಹೃತಿ ಅಂತರ್ಗತನೆಂದೂ, ವ್ಯಾಹೃತಿವಾಚ್ಯನಾಗಿ, ವ್ಯಾಹೃತಿಪ್ರತಿಪಾದ್ಯನಾಗಿರುವನೆಂದೂ ಅನುಸಂಧಾನಮಾಡಬೇಕು. ಅಲ್ಲದೆ ಈ ವ್ಯಾಹೃತಿಯ ಮೂರು ಅಕ್ಷರಗಳಿಗೂ ಪ್ರತ್ಯೇಕವಾಗಿ ಬೇರೆ ಬೇರೆ ಅನುಸಂಧಾನಕ್ರಮ ಇಂತಿದೆ.

(೩) ಭೂಃ—ವ್ಯಾಹೃತಿಯ ಈ ಒಂದು ಅಕ್ಷರಕ್ಕೆ ದೇವತಾ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಭೂವಾಚ್ಯನಾಗಿ. ಭೂವರ್ಣಅಂತರ್ಗತನಾಗಿ, ಅನಿರುದ್ಧ-ವರಾಹ ಹೀಗೆ ಎರಡು ರೂಪಗಳೆಂದು ಅನುಸಂಧಾನ ಮಾಡಬೇಕು.

೪) ಭುವಃ—ಇದಕ್ಕೆ ದೇವತೆ ಜಮದಗ್ನಿ ಋಷಿ, ಉಷ್ಣಿಕ್ ಛಂದಸ್ಸು. ಭುವಃ ಎಂದು ವಾಚ್ಯನಾಗಿ ಅದರಲ್ಲಿ ಅಂತರ್ಗತನಾಗಿ ಪ್ರದ್ಯುಮ್ನ-ನರಸಿಂಹ ಎಂಬ ಎರಡು ರೂಪಗಳಿಂದ ಇರುವನೆಂದು ಅನುಸಂಧಾನಮಾಡಬೇಕು.

(೫) ಸ್ವಃ **ಅಥವಾ ಸುವಃ**—ಎಂಬ ವ್ಯಾಹೃತಿ ಅಕ್ಷರದ್ವಯಕ್ಕೆ ದೇವತಾ ? ಭಾರದ್ವಾಜ ಋಷಿ, ಅನುಷ್ಟುಪ್ ಛಂದಸ್ಸು, 'ಸುವಃ' ಎಂದು ವಾಚ್ಯನಾಗಿ, ಸೂರ್ಯಾಂತರ್ಗತನಾಗಿ ಸುವಃ ಎಂಬ ವರ್ಣಗಳ ಅಂತರ್ಗತನಾಗಿ, ಕಪಿಲ-ಸಂಕರ್ಷಣ ಎಂಬೆರಡು ರೂಪಗಳಿಂದಿರುವನೆಂದು ಅನುಸಂಧಾನ.

(೬) ತತ್ಸವಿತುಃ....ಪ್ರಚೋದಯಾತ್. ಇದಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಸವಿತೃನಾಮಕನಾದ ಆದೇ ಉದಯಿಸಿದ ಸೂರ್ಯಸಂಥಾ ಕಾಂತಿಯುಕ್ತ ಸೂರ್ಯಮಂಡಲ ಮಧ್ಯಗತನಾದ ಚಕ್ರಶಂಖಗಳಿಂದ ಯುಕ್ತನಾದ ಬಾಹುದ್ವಯಗಳುಳ್ಳ ಗಾಯತ್ರ್ಯಂತರ್ಗತ ನಾರಾಯಣನನ್ನು ಅನುಸಂಧಾನಮಾಡ ಬೇಕು.

(೭) ಗಾಯತ್ರೀಗೆ ಪ್ರಥಮವರ್ಣವಾದ 'ತ' ವರ್ಣಕ್ಕೆ ಅಗ್ನಿ ಅಭಿಮಾನಿ ದೇವತಾ, ತದಂತರ್ಗತದಲ್ಲಿ ಪರಶುರಾಮದೇವರನ್ನು ಚಿಂತಿಸಬೇಕು. ಆದಿ ಅಕ್ಷರ ರೂಪವಾದ 'ತ'ಕಾರ ಆರಂಭಮಾಡಿ (೨೪) ಗಾಯತ್ರೀ ಅಕ್ಷರಗಳಲ್ಲಿ ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಅಂತರ್ಗತತ್ವೇನ ಅನುಸಂಧಾನಮಾಡಬೇಕು.

(೮) 'ತತ್ಸವಿತುರ್ವರೇಣ್ಯಂ' ...ಎಂಬ ಆದ್ಯಪಾದಕ್ಕೆ ಅನಿರುದ್ಧ ದೇವತಾ, ಆದ್ಯಪಾದದ ಅಂತರ್ಗತನಾಗಿ ಅನಿರುದ್ಧನನ್ನು ಚಿಂತಿಸಬೇಕು.

(೯) 'ಭರ್ಗೋ ದೇವಸ್ಯ ಧೀಮಹಿ' ಎಂಬ ಎರಡನೆಯ ಪಾದಕ್ಕೆ ಪ್ರದ್ಯುಮ್ನನು ದೇವತಾ, ಪ್ರದ್ಯುಮ್ನ ಈ ಪಾದದಂತರ್ಗತನೆಂದು ಅನುಸಂಧಾನ ಮಾಡಬೇಕು.

(೧೦) 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ಮೂರನೆಯ ಪಾದಕ್ಕೆ ಸಂಕರ್ಷಣನು ದೇವತಾ, ಅವನನ್ನು ಈ ಪಾದದ ಅಂತರ್ಗತನೆಂದು ಅನುಸಂಧಾನ ಮಾಡಬೇಕು.

(೧೧) **ಗಾಯತ್ರಿಯ ಅರ್ಥ :** ಸರ್ವವೇದಗಳಿಂದಲೂ ಗಾಯನ ಮಾಡಿಸಿಕೊಳ್ಳುವವನಾದ್ದರಿಂದ ಮತ್ತು ಚರಾಚರ ಸರ್ವವನ್ನೂ ಸಂರಕ್ಷಣ ಮಾಡುವ ತ್ರಾಣ ಉಳ್ಳವನಾದ್ದರಿಂದ-ಗಾನ ಮಾಡಿಸಿಕೊಳ್ಳುವವ-ಸಂರಕ್ಷಣ ಮಾಡುವವ-ಗಾನಂ-ತ್ರಾಣಂ ಗಾಯತ್ರೀ ಎಂದು ಪರಮಾತ್ಮನ ನಾಮ ಬರೋದಾಯಿತು. ಇಂಥ ಭಗವಂತ ಷಡ್ವಿಧನೆಂದು ತಿಳಿಯಬೇಕು, ಉಪಾಸಿಸಬೇಕು.

**ಷಡ್ವಿಧರೂಪಗಳ ವಿವರ :** (೧೨) 'ತತ್ಸವಿತುಃ' ಗಾಯತ್ರೀನಾಮಕ ಹರಿಯು ಆರು ರೂಪಗಳನ್ನು ಧರಿಸಿರುತ್ತಾನೆ. ಗಾಯತ್ರ್ಯಂತರ್ಗತ, ಗಾಯತ್ರೀ ವಾಚ್ಯನಾದ ಹರಿಯರೂಪ 'ಸ್ತ್ರೀರೂಪ'. ಈ ನಾಲ್ಕು ಅಕ್ಷರಗಳಲ್ಲಿ ಸೂರ್ಯನಂತೆ ಕಾಂತಿ ಉಳ್ಳ 'ಹಯಶೀರ್ಷ' ಹಯಗ್ರೀವ ದೇವರು ಅಂತರ್ಗತನು. ಇದು ಪ್ರಥಮ ರೂಪ.

(೧೩) ವರೇಣ್ಯಂ :—ಈ ಅಕ್ಷರಗಳಲ್ಲಿ 'ಭೂತ'ನಾಮವಾಚ್ಯನಾದ ರೂಪವು ಎರಡನೆಯದು. (೧೪) 'ಭರ್ಗೋ ದೇವಸ್ಯ' (೧೫) 'ಧೀಮಹಿ' (೧೬) ಧಿಯೋ ಯೋ ನಃ (೧೭) ಪ್ರಚೋದಯಾತ್ ಇವುಗಳಲ್ಲಿಯ ಉಳಿದ ನಾಲ್ಕು ರೂಪಗಳನ್ನು ಸು.ಭಾ.ವಿ ೧೮ರಲ್ಲಿ ಹೇಳಿದೆ. (ಇದೇ ಗಾಯತ್ರೀ ಮಂತ್ರವನ್ನು ಹತ್ತು ಅಂಶಗಳಲ್ಲಿ ವಿಂಗಡಿಸಿ ಅದರ ಅರ್ಥವನ್ನು ವಿವರಿಸುತ್ತಾರೆ.)

೧ ಯಃ=ದಾವ ಈ ಜಗತ್ತನ್ನು ೨ ಭರ್ಗಃ (ಭ+ರ+ಗ=ಭರ್ಗಃ =ಪ್ರಕಾಶ-ಸುಖ ಜ್ಞಾನರೂಪವಾದದ್ದು, ಋಗ್ಭಾಷ್ಯೋಕ್ತವಾದದ್ದು) ಭರಣ ಗಮನಕರ್ತಾ ಅಂದರೆ ಈ ಜಗತ್ತನ್ನು ನಡೆಸೋದರಲ್ಲಿ ಸಮರ್ಥಕರ್ತನು, ೩ ನಃ=ನಮ್ಮ ೪ ಧಿಯಃ=ತಮ್ಮ ಬುದ್ಧಿಯನ್ನು ೫ ಪ್ರಚೋದಯಾತ್ =ತನ್ನ ವಿಷಯದಲ್ಲಿ ಪ್ರೇರಿಸೋಣವಾಗಲಿ. ೬ ಸವಿತುಃ=ಜಗದುತ್ಪಾದಕನಾದ ೭ ದೇವಸ್ಯ=ಕ್ರೀಡಾದಿ ಗುಣವಿಶಿಷ್ಟನಾದವನು ೮ ತತ್=ವ್ಯಾಪ್ತನಾದ (ಸರ್ವತ್ರ) ೯ ವರೇಣ್ಯಂ=ಭಜನೀಯನಾದ ಶ್ರೇಷ್ಠನಾರಾಯಣನನ್ನು ೧೦ ಧೀಮಹಿ=ಧ್ಯಾನಮಾಡುತ್ತೇವೆ. ಹೀಗೆ ಈ ಪ್ರಕಾರ ತಿಳಿದು ಗಾಯತ್ರಿಯ ಅನುಸಂಧಾನಪೂರ್ವಕ ಜಪಿಸುವದೇ ಫಲವಿದು ಬಾಳ್ದುದಕೆ. ಹೀಗೆ ಹೇಳಿದ್ದರ ಕಾರಣ ವೇನೆಂದರೆ ಜ್ಞಾತ-ಅಜ್ಞಾತ (ತಿಳಿದೋ-ತಿಳಿಯದೆಯೋ) ದಿಂದ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತಾದಿಗಳನ್ನು ಅಧಿಕಾರಿಗಳು ಮಾಡಿಕೊಳ್ಳದಿದ್ದರೆ, ಪಾಪಗಳು ಅತಿಶಯ ವಾಗಿಅದರಿಂದ ಅಜ್ಞಾನ ಅತಿಶಯವಾಗಿ ತತ್ಪರಿಣಾಮದಿಂದ ಭಗವದ್ವಿಸ್ಮರಣೆ ಪ್ರಾಪ್ತ ವಾಗಿ ಐಹಿಕ ಪಾರತ್ರಿಕದಲ್ಲಿ ದುಃಖಗಳನ್ನು ಭೋಗಿಸಬೇಕಾಗುತ್ತದೆ, ಆದ್ದರಿಂದ ಅವುಗಳ ಪರಿಹಾರಕ್ಕಾಗಿ ಈ ಮೊದಲು ಹೇಳಿದಂತೆ ಗಾಯತ್ರೀ ಮಂತ್ರ ಜಪವನ್ನು ಅನುಸಂಧಾನಪೂರ್ವಕ ಮಾಡಿ ಉದ್ಧಾರವಾಗಬೇಕೆಂದರ್ಥ, ಹಾಗಾದರೆ ಗಾಯತ್ರಿಯ ಮಂತ್ರಜಪದಿಂದ ಸರ್ವಪಾಪಗಳೂ ನಾಶವಾಗುವವೇ ? ಎಂಬ ಸಂಶಯಕ್ಕೆ ಉತ್ತರ. ಇದರಿಂದ ಸರ್ವಪಾಪಗಳೂ ಹೋಗಲಾರವು, ಹೋಗತಕ್ಕದ್ದು ದಾವದಿದೆಯೋ ಅಷ್ಟುಮಾತ್ರವೇ ಹೋಗುವದೆಂಬ ತಾತ್ಪರ್ಯ. ತದನ್ಯ ಹೋಗು ವುದಿಲ್ಲ, (ಈ ವಿಷಯದಲ್ಲಿ ಪ್ರಮಾಣವೆಂದು ವ್ಯಾಖ್ಯಾನಕಾರರು ವರಾಹಪುರಾಣ ಚಾತುರ್ಮಾಸಾಖ್ಯ ೬೨೫ ಇದರಲ್ಲಿಯ 'ದೈವಾದಾಪತ್ರಿ......'ಎಂದಾರಂಭಿಸಿ ಹತ್ತು ಶ್ಲೋಕಗಳನ್ನೂ ಮತ್ತು ೬೨೭ರಲ್ಲಿಯ 'ಜ್ಞಾನದ್ಧ್ಯೇವ ತು ಕೈವಲ್ಯಂ. ......' ಎಂಬ ನಾಲ್ಕು ಶ್ಲೋಕಗಳನ್ನೂ ಉದಾಹರಿಸಿದ್ದಾರೆ. ಇದರಂತೆ 'ಅಲ್ಪಪಾಪಗಳು' ಮಹಾಪಾತಕ ವ್ಯತಿರಿಕ್ತವಾದವುಗಳು. ಪ್ರಾಯಶ್ಚಿತ್ತ ಪ್ರಯುಕ್ತ ಪರಿಹಾರವಾಗು ವುವು, ಅಲ್ಪಪಾಪಗಳು: ಇವುಗಳ ವಿವರ (೧) ತನ್ನ ಪ್ರಯತ್ನವಿಲ್ಲದೇ ದೈವಾ ಯತ್ತಾಗಿ ಸಂಭವಿಸಿದ ಪೂರ್ವೋಕ್ತ ಪಾಪಗಳು. ಅಲ್ಪ ಪಾಪಗಳು ಪ್ರಾಯಶ್ಚಿತ್ತ ದಿಂದ ಪರಿಹಾರ ಖರೇವೇ. ಆದರೂ ಅತ್ಯಂತ ಪ್ರಾಯಶ್ಚಿತ್ತವನ್ನು (ಅಂದರೆ ಅತ್ಯಂತ ಪಶ್ಚಾತ್ತಾಪದಿಂದ ಯುಕ್ತವಾದದ್ದು) ಮಾಡಿಕೊಂಡರೇನೆ ಪಾಪ ಪರಿಹಾರವಾಗು ತ್ತದೆ. ಪಶ್ಚಾತ್ತಾಪರಹಿತವಾಗಿ ಲೋಕವನ್ನು ಮೆಚ್ಚಿಸೋ ನಿಮಿತ್ತ (ಬಾಹ್ಯಾ ಡಂಬರ) ಪ್ರಾಯಶ್ಚಿತ್ತ ಮಾಡಿಕೊಂಡರೆ ಈ ಪಾಪಗಳು (ಅಲ್ಪವಾದರೂ) ಪರಿಹಾರ ವಾಗೋದಿಲ್ಲ. ಪ್ರಾಯಶ್ಚಿತ್ತ ಮಾಡಿಕೊಂಡವನೆಂದು ಮಾತ್ರ ಕರೆಸತಾನೆ. ೨) ಮಹಾಪಾತಕವ್ಯತಿರಿಕ್ತವಾದ ಪೂರ್ವೋಕ್ತ ಪಾಪಗಳು ತಾನು ಇಚ್ಛಾ ಪಡಿ

ಯಾಗಲೀ, ಮಾಡದೇನೇ ಆಗಲೀ ಘಟಿಸಿರತದೆ, ಇವೂ ಕೂಡ ಪಶ್ಚಾತ್ತಾಪದಿಂದ ಯುಕ್ತನಾಗಿ ಈ ವಿಧ (ಜಪರೂಪ) ಪ್ರಾಯಶ್ಚಿತ್ತ ಮಾಡಿಕೊಂಡರೆ ಅವೂನೂ ಪರಿಹಾರವಾಗತವೆ. ತನ್ನಿಚ್ಛೆಯಿಂದ ಮಾಡಿದ ಪಾಪಗಳೆಂದರೆ, ತನಗೆ ಪ್ರಾಪ್ತವಾದ ಮಹಾವಿಪತ್ತುಗಳ ಪರಿಹಾರಕ್ಕಾಗಿ ಮಾಡಲಿಕ್ಕೆ ಕಾಮತಃ ಮಾಡಿದ ಪಾಪಗಳು ಎಂತ ತಾತ್ಪರ್ಯ. ಅಕಾಮತಃ ತನಗೆ ಪಾಪಮಾಡಬೇಕೆಂಬ ಇಚ್ಛೆ ಇಲ್ಲದಿದ್ದರೂ ರಾಜದಂಡನಾದಿಗಳ ನಿಮಿತ್ತ ನಿರ್ಬಂಧದಲ್ಲಿ ಸಿಕ್ಕು ಸುಕರ್ಮಗಳ ತ್ಯಾಗರೂಪವಾದ ಮಾಡಲ್ಪಟ್ಟ ಪಾಪಗಳು, 'ಅಕಾಮತಃ' ಪಾಪಗಳೆಂದು ಸಂಕೇತ. ಇವೆರಡೂ ಪಶ್ಚಾತ್ತಾಪರೂಪ ಅನುಸಂಧಾನ ಯುಕ್ತ ಜಪವೆಂಬ ಪ್ರಾಯಶ್ಚಿತ್ತದಿಂದ ಪರಿಹಾರವಾಗತವೆ. ಬರೀ ಪ್ರಾಯಶ್ಚಿತ್ತರೂಪ ಜಪದಿಂದ ಶುದ್ಧನಾಗುವುದಿಲ್ಲ. ಬರೀ ಪಶ್ಚಾತ್ತಾಪದಿಂದಲೂ ಶುದ್ಧನಾಗುವುದಿಲ್ಲ, 'ಪಶ್ಚಾತ್ತಾಪೇನ ಶುದ್ಧಿಃ' ಎಂಬುದಕ್ಕೆ ಇದು ತಾತ್ಪರ್ಯ. ಮತ್ತು ಇದರ್‍ಹಾಗೆ ಕೆಲವು ಅಲ್ಪಪಾಪಗಳು ಪಶ್ಚಾತ್ತಾಪದಿಂದ ಶುದ್ಧಿ ಎಂತಲೂ ತಾತ್ಪರ್ಯ. ಇನ್ನು ಮಹಾಪಾಪಗಳು ಎಂದರೆ ೧) ಇವುಗಳನ್ನು ಮಾಡುವುದರಲ್ಲಿ ಕಾಮನಾ ಇಲ್ಲದಿದ್ದರೂ ದೈವವಶದಿಂದ ಘಟನೆಯಾಗಿ ಮಾಡಲ್ಪಡುವ ಪಾಪಗಳು, ಇವು ಪಶ್ಚಾತ್ತಾಪದಿಂದ ಸಹಿತವಾದ ಪ್ರಾಯಶ್ಚಿತ್ತಗಳಿಂದ ನಾಶವಾಗತವೆ. ೨) ದೈವವಶಾತ್ ಅಲ್ಲದೇ ಮನಃಪೂರ್ವಕ ಮಾಡಿದರೆ ಅವು ಪಶ್ಚಾತ್ತಾಪಯುಕ್ತ ಪ್ರಾಯಶ್ಚಿತ್ತಗಳಿಂದ ನಾಶವಾಗುವುದಿಲ್ಲ. ಭೋಗದಿಂದಲೇ ನಾಶ, ಇಂಥಾ ಭೋಗ ಮೂರು ವಿಧವಾಗಿ ಮಾಡಿದ್ದ ಕಾಲಕ್ಕೂ ಆ ಪಾಪಗಳು ಬಹುವಿಧ ಪ್ರಾಯಶ್ಚಿತ್ತಗಳಿಂದ ನಾಶವಾಗುವುದಿಲ್ಲ. ಭೋಗ ಮಾಡಿಯೇ ಅವುಗಳ ಕ್ಷಯ, ಅಪರಿಹಾರ್ಯ ಈ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡೋಣವೆಂಬುದು ಲೋಕವಿಡಂಬನೆಯೇ ಹೊರ್ತು ಅದರಿಂದ ಶುದ್ಧನಾಗೋದಿಲ್ಲ. ಇಂಥಾ ಪಾಪಗಳಿಗೆ ಪ್ರಾಯಶ್ಚಿತ್ತವೇ ಇಲ್ಲ. ಅವಶಿಷ್ಟ (ಇನ್ನಿತರವನ್ನು) ವರಾಹಪುರಾಣ ಶ್ಲೋಕಗಳನ್ನು (ಮೇಲೆ ಹೇಳಿದಂತೆ) ತಿಳಿದು ಆ ಪ್ರಕಾರ ಅರ್ಥಮಾಡಿಕೊಳ್ಳಬೇಕು. ಗಾಯತ್ರಿಯಲ್ಲಿ ಹೇಳಿದ ಪಾಪಗಳು ಗಾಯತ್ರಿಯಿಂದಾ ಪ್ರಾಯಶ್ಚಿತ್ತರೂಪ (ಪಶ್ಚಾತ್ತಾಪಯುಕ್ತವಾಗಿ) ದಿಂದ ನಾಶವೆಂದು ತಾತ್ಪರ್ಯ, ಹಾಗೆಯೇ ಸಮನ್ವಯವು,

(ಗು) ಈರೆರಡಂಘ್ರಿಗಳ = ಚತುಷ್ಪಾದಗಳಿಗೆ ಅನಿರುದ್ಧಾದಿರೂಪಗಳು ಷಟ್ಕುಕ್ಷಿಗೆ ವಿವರ ಹೀಗೆ (ಅಂಗನ್ಯಾಸ-ಕರನ್ಯಾಸ ಮಾಡುವಾಗ ಹೇಳಿಕೊಳ್ಳುವ ಕ್ರಮದಂತೆ) ೧, ತತ್‌ಸವಿತುಃ (೪ ಅಕ್ಷರ) ೨. ವರೇ(ಣ್ಯಂ) ಣಿಯಂ (೪ ಅಕ್ಷರ) ೩. ಭರ್ಗೋ ದೇವಸ್ಯ (೫ ಅಕ್ಷರ) ೪. ಧೀಮಹಿ (೩ ಅಕ್ಷರ) ೫, ಧಿಯೋ ಯೋ ನಃ (೪ ಅಕ್ಷರ) ೬. ಪ್ರಚೋದಯಾತ್ (೪ ಅಕ್ಷರ) ಗಾಯತ್ರಿಯ ಇಪ್ಪತ್ತುನಾಲ್ಕು ಅಕ್ಷರಗಳಿಗೆ ಕೇಶವಾದಿ ಚತುರ್ವಿಂಶತಿರೂಪಗಳು ವಾಚ್ಯ

ವಾಗಿವೆ. ಈ ಚತುರ್ವಿಂಶತಿ ರೂಪಗಳೇ ಇಪ್ಪತ್ತುನಾಲ್ಕು ತತ್ವಗಳಿಗೆ (ಅವ್ಯಕ್ತಾದಿ ತತ್ವಗಳಿಗೆ) ಅಭಿಮಾನಿಗಳಾದ ತತ್ತ್ವಾಭಿಮಾನಿ ದೇವತೆಗಳಿಗೆ ಪ್ರೇರಕರು (ನಿಯಾಮಕರು). ಈ ಅನುಸಂಧಾನಯುಕ್ತನಾಗಿ ನ್ಯಾಸಮಾಡಿಕೊಂಡು ನೂರೆಂಟು ಗಾಯತ್ರೀ ಜಪಮಾಡಿದರೆ ಸಕಲ ಕರ್ಮಗಳಿಂದ ಮುಕ್ತನಾಗುವ. ಈ ರೀತಿ ಸಾದರದಲಿ ಧೇನಿಸಿ-ಪರಮಾದರದಿಂದ ಜ್ಞಾನಪ್ರರಸ್ಸರನಿರುತ, ಜಪಿಸುವದೆ-ಶ್ರೀಹರಿ ಪ್ರೀತ್ಯರ್ಥ ಜಪಮಾಡಿ ಸಮರ್ಪಣ ಮಾಳ್ಪುದೇ ಫಲವಿದು ಬಾಳ್ದುದಕೆ.

ಈರೆರಡು-ಎರಡೆರಡು ಎಂದರೆ ನಾಲ್ಕು ಈರೆರಡಂಘ್ರಿಯ, ನಾಲ್ಕು ಪಾದಗಳನ್ನು ತರುವಾಯದಿ- ಆಮೇಲೆ, ಬಳಿಕ.

(ಖೀ) ಈರೆರಡಂಘ್ರಿಯ ಷಡ್ವಿಧರೂಪವ ಎಂಬಲ್ಲಿ- 'ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ' ಎಂದು ಛಾಂದೋಗ್ಯೋಪನಿಷತ್ತು ಗಾಯತ್ರಿಗೆ ನಾಲ್ಕು ಪಾದಗಳಿವೆಯೆಂದೂ ಅದು ಆರು ವಿಧವಾಗಿದೆಯೆಂದೂ ಹೇಳುತ್ತದೆ. ['ಚತುರ್ಥಪಾದೋ ಗಾಯತ್ರ್ಯಾಃ ಪ್ರಣವ ಸಮುದೀರಿತಃ' ಎಂದು ಬೃಹದ್ಭಾಷ್ಯದಲ್ಲಿ ಉದಹರಿಸಿದ (೭—೧೪—೧) ತ್ರೈವಿದ್ಯೆಯೆಂಬ ಪ್ರಮಾಣವು ಹೇಳುವಂತೆ] ಪ್ರಣವವು ನಾಲ್ಕನೇಪಾದ. ತತ್ಸವಿತುಃ ಇತ್ಯಾದಿ ಒಂದನೇ ಪಾದ, ಭರ್ಗೋ, ದೇವಸ್ಯ ಎಂಬುದು ಎರಡನೇ ಪಾದ, ಧಿಯೋ ಯೋ ನಃ ಇತ್ಯಾದಿ ಮೂರನೇ ಪಾದ. ಈ ಗಾಯತ್ರೀ ಜೊತೆಗೆ ಭೂರ್ಭುವಸ್ಸುವಃ ಎಂಬ ವ್ಯಾಹೃತಿಗಳೂ ಪ್ರಣವವೂ ಸೇರಿದರೆ ಪಂಚ ಸಂಧಿಯಿಂದ ಕೂಡಿದ ಸಂಧ್ಯಾಗಾಯತ್ರಿಯಾಗುತ್ತದೆ; ಇದಕ್ಕೆ ವಿಶ್ವಾಮಿತ್ರರೇ ಋಷಿಗಳು. ತತ್ಸವಿತುಃ ಎಂದಾರಂಭಿಸಿ ಪ್ರಚೋದಯಾತ್ ವರೆಗಿರುವುದೇ ಬ್ರಹ್ಮಗಾಯತ್ರೀ; ಇದಕ್ಕೆ ಬ್ರಹ್ಮದೇವರೇ ಋಷಿಗಳಾದ್ದರಿಂದ ಇದನ್ನು ಬ್ರಹ್ಮಗಾಯತ್ರೀ ಎನ್ನುತ್ತಾರೆ. ಇದು ಅಷ್ಟಮಹಾಮಂತ್ರಗಳ ಪೈಕಿ ಐದನೇ ಮಹಾಮಂತ್ರ.

ಗಾಯತ್ರಿಯ ಷಡ್ವಿಧರೂಪವನ್ನು ಛಾಂದೋಗ್ಯಭಾಷ್ಯದಲ್ಲಿ (೫ ಅಧ್ಯಾ. ೧೨ ಖಂಡ) ಉದಹರಿಸಿದ ಈ ಪ್ರಮಾಣವಾಕ್ಯಗಳು ವಿವರಿಸುತ್ತವೆ :-

ಅನಲಾಂಗಾರನೊಳಿದ್ದೋಸಾದಿಯು ।
ಲನಿರುದ್ಧನು ಚೇತನರೊಳಗೆ ॥
ಕ್ಷಣಬಿಟ್ಟಗಲದೆ ಏಕೋ ನಾರಾ ।
ಯಣ ಶ್ರುತಿಪ್ರತಿಪಾದ್ಯನು ಇಹನೆಂಬುದೆ ॥೧೬॥

ಈ ನುಡಿಯ ಸಂಖ್ಯೆ ಇತರ ಪ್ರಕಾಶನಗಳಲ್ಲಿ ೨೨ ಎಂದಿದೆ.

ಅನಲ-ಬೆಂಕಿ, ಅಂಗಾರ-ಇದ್ದಿಲಿ, ಬೆಂಕಿ ಇದ್ದಿಲಿಯೊಳಗೆ ವ್ಯಾಪಿಸಿ ಇದ್ದಂತೆ

ಅನಿರುದ್ಧನು, ಚೇತನರೊಳಗೆ-ಚೇತನಸಂಕೇತವಾದ ಸ್ಥಾವರ ಜಂಗಮ ಜೀವರೊಳಗೆ, ಕ್ಷಣಬಿಟ್ಟಗಲದೆ-ಕ್ಷಣವಾದರೂ ಬಿಟ್ಟು ಅಗಲದೆ, ದೂರವಾಗದೇ. ಏಕೋ ನಾರಾಯಣ-ನಾರಾಯಣನೊಬ್ಬನೇ ಎಂದು ವೇದ ಶ್ರುತಿಗಳಿಂದ ಪ್ರತಿಪಾದ್ಯ ಎಂತ ಅಂಬೋಣ ದಾವದದೆ ಇದೇ ಬದುಕಿದ್ದಕ್ಕೆ ಫಲ. ಪ್ರತೀತಾರ್ಥದಲ್ಲಿ ಅಗ್ನಿ ವ್ಯಾಪಿಸಿದ್ದಂತೆ ಜೀವನನಲ್ಲಿ ಹರಿ ವ್ಯಾಪಿಸಿದ್ದಾನೆ. ಇದ್ದಿಲಿ ಕಪ್ಪಾದರೂ ಅದರ ಅಂತರ್ಗತ ಅಗ್ನಿ ಇದ್ದಿಲಿಯ ಕಪ್ಪಿಗೆ (ಪ್ರಾಕೃತ ಗುಣಧರ್ಮಗಳಿಗೆ) ಸಂಬಂಧಪಡದೇ ತನ್ನ ಸ್ವಭಾವವಾದ, ಸ್ವಚ್ಛರೂಪವಾದ (ತೇಜಯುಕ್ತನಾಗಿ) ಇದ್ದಾನೆ. ತದ್ವತ್, ಜೀವ ಅಪೂರ್ಣ, ಬದ್ಧ, ಜಡಸಂಬಂಧ, ಸುಖದುಃಖಾದಿ ಲೇಪ ಉಳ್ಳವ, ಅವನ ಅಂತರ್ಗತನಾದ ಪರಮಾತ್ಮ ಆ (ಪ್ರಾಕೃತ)ದೋಷಗಳಿಗೆ ಸಂಬಂಧಪಡದೇ ತಾನು ಸ್ವಚ್ಛವಾಗಿ ಜೀವ ಭೋಗವನ್ನ ತಾನು ಭೋಗ ಮಾಡದೆ ತನ್ನ ಸ್ವಾಖ್ಯಗಳನ್ನು (ಅಪ್ರಾಕೃತ ತನ್ನದೇ ಆದ) ಸುಖಗಳನ್ನ ಭೋಗಮಾಡತಾ ಇರುವನೆಂದು ತಿಳಿಯಬೇಕೆಂದು ದೃಷ್ಟಾಂತವು ಅತಏವ 'ಅನಿರುದ್ಧ' ಶಬ್ದ ಪ್ರಯೋಗವು: ದಾವುದರಿಂದಲೂ 'ನಿರುದ್ಧ'ನಲ್ಲ. ಪರಮನಾದ್ದರಿಂದ ಅ-ನಿರುದ್ಧ ಎಂತ ತಾತ್ಪರ್ಯ. ಜೀವನು ಪ್ರಾಕೃತ ಸುಖದುಃಖಾದಿಗಳಿಂದ 'ನಿರುದ್ಧನು' ಆದರೆ ಅವನಂತರ್ಗತ ಹರಿಯು ಜೀವನಂತೆ ನಿರುದ್ಧನಲ್ಲ. ಆದ್ದರಿಂದ ಜೀವನಲ್ಲಿರತಕ್ಕ ಅನಿರುದ್ಧ, ಆ ಶಬ್ದದಿಂದ ವಾಚ್ಯನಾದ ಮತ್ತು ಅಗ್ನಿ ಅಂಗಾರದಲ್ಲಿ ಹೇಗೆ ವ್ಯಾಪ್ತವೋ ಹಾಗೆ ಜೀವಾಂತರ್ಗತ ಅನಿರುದ್ಧ ಜೀವನ ಒಳಗೂ ಹೊರಗೂ ವ್ಯಾಪ್ತನೆಂದು ತಾತ್ಪರ್ಯ. ಇನ್ನು ಅಂಗಾರಕ್ಕೂ ತದ್ಗತ ಅಗ್ನಿಗೂ ಉಪಾಧಿ ವಶಾತ್ ವಿಯೋಗ ಕಂಡರೆ?, ಹಾಗೆ ಜೀವ-ಪರಮಾತ್ಮರಿಗೆ ವಿಯೋಗ ಉಂಟೇ ಎಂಬ ಶಂಕೆಗೆ ಉತ್ತರವಾಗಿ 'ಕ್ಷಣಬಿಟ್ಟಗಲದೇ'-ಜೀವನ ಅಂತರ್ಗತ ಹರಿಯು ಜೀವನನ್ನು ಬಿಟ್ಟು ಕ್ಷಣಲವಕಾಲವಾದರೂ ಬಿಟ್ಟಗಲುವುದಿಲ್ಲ, ಅವಿಯೋಗಿಯಾಗಿ ಇರುವನೆಂದು ತಾತ್ಪರ್ಯ, ಅಧಿಷ್ಠಾನಭೂತನಾದ ಜೀವ ನಷ್ಟವಾದರೆ ತದ್ಗತ ಪರಮಾತ್ಮಗೆ ವಿಯೋಗ ಕಾಣಬೇಕಲ್ಲ ಅಂದರೆ, ಜೀವ ಅನಾದಿನಿತ್ಯ, ಈಶ್ವರನಿಂದ 'ರಚಿತ'ನಲ್ಲ; ಆದ್ದರಿಂದ ಜೀವಗೆ ನಾಶವಿಲ್ಲ. ಹಾಗೆಯೇ ಪರಮಾತ್ಮನ ವಿಯೋಗವೂ ಇಲ್ಲವೆಂದು ತಿಳಿಯಬೇಕು. ಏಕೋ ನಾರಾಯಣ-ಜೀವಾಂತರ್ಗತನಲ್ಲಿ ಬ್ರಹ್ಮಾದಿ ದೇವತೆಗಳು ಇದ್ದಾರೇ? ಇಲ್ಲವೇ? ಎಂದರೆ ಅದಕ್ಕೆ ಉತ್ತರವೆಂದು ಏಕೋ ನಾರಾಯಣಃ ಶಬ್ದ ಪ್ರಯೋಗ ಮಾಡಿದ್ದಾರೆ. ಪ್ರಳಯಕಾಲದಲ್ಲಿ ಲಕ್ಷ್ಮೀಸಮೇತನಾದ ನಾರಾಯಣನೊಬ್ಬನೇ ಇರುತ್ತಾನೆಂದು ಹೊರತು (ನ ಬ್ರಹ್ಮಾ ನ ಚ ಶಂಕರಃ) ಬ್ರಹ್ಮಾದಿ ದೇವತೆಗಳು ಪ್ರಳಯಕಾಲದಲ್ಲಿ ಪರಮಾತ್ಮನ ಉದರದಲ್ಲಿದ್ದು ಹೊರಗೆ ಯಾರೂ ಇರುವುದಿಲ್ಲ. ಜೀವಾಂತರ್ಗತ ಅನಿರುದ್ಧನು ಲಕ್ಷ್ಮೀಸಮೇತನಾಗಿ ಒಬ್ಬನೇ (ಹೊರಗೆ ನಾರಾಯಣರೂಪದಿಂದ) ಇರತಾನೆ. ಬ್ರಹ್ಮಾದಿ ತತ್ವೇಶರು ಜೀವಾಂತರ್ಗತರಾಗಿ ಇರುವುದಿಲ್ಲ. ಆದ್ದರಿಂದ ಏಕೋ ನಾರಾಯಣ ಎಂಬ ಶ್ರುತಿ ಪ್ರತಿಪಾದ್ಯ

ಎಂದು ಹೇಳಿದರು. ಶ್ರುತಿ-ವೇದ. ಅಪೌರುಷೇಯವಾದ ವೇದಗಳಿಂದ ಸರ್ವೋತ್ತಮನೆಂದು ಶ್ರುತಿ ಪ್ರತಿಪಾದ್ಯನು ನಾರಾಯಣನೆಂದು ತಾತ್ಪರ್ಯ. ಸರ್ವೋತ್ತಮ ನಾರಾಯಣನು ಮೂಲರೂಪಿ ಎಂದು ಹೇಳೋಣದರಿಂದ ಪರಮಾತ್ಮನು ಆ ರೂಪದಿಂದ, ದೀಪದಿಂದ ಉಳಿದ ದೀಪಗಳು ಹಚ್ಚುವಂತೆ ಹೊರಟ ಅವತಾರ ರೂಪಗಳೂ ಕೂಡ ಸರ್ವೋತ್ತಮಗಳೇ. ಮೂಲ-ಅವತಾರಗಳಿಗೆ ಭೇದ ವರ್ಜಿತಗಳೆಂತಲೇ ತಾತ್ಪರ್ಯ. ಅಂದರೆ ಮೂಲರೂಪಕ್ಕೂ-ಅವತಾರ ರೂಪಕ್ಕೂ (ವೈಕುಂಠಾದಿ ತ್ರಿಸ್ಥಾನಗಳಲ್ಲಿಯ ಹಾಗೆ, ಜೀವರ ಸ್ವರೂಪ ದೇಹ ಗಳಲ್ಲಿಯ ಹರಿಯ ರೂಪಕ್ಕೂ) ಅತ್ಯಂತ ಅಭೇದವೆಂಬುದನ್ನು ತಿಳಿಯಬೇಕು. ಪರಮಾತ್ಮನು ಇಂಥವ, ಜೀವ ಇಂಥವ ಎಂಬ ವಿವೇಕವನ್ನು ತಿಳಿಯುವುದೇ ಬದುಕಿದ್ದಕ್ಕೆ ಫಲ.

(ಗು) ಅನಳಾಂಗಾರನೊಳು :—ಬೆಂಕಿ ಇದ್ದಿಲವೊಳಗೆ ಇದ್ದ ಪ್ರಕಾರ ಅಗ್ನಿ ದಾವ ಪ್ರಕಾರ ಆಚ್ಛಾದನವಾಗಿ (ವ್ಯಕ್ತಾವ್ಯಕ್ತದಿಂದ) ಹ್ಯಾಂಗಿರತದೋ ಹಾಂಗೆ ಶಾಂತಿಪತಿ ಅನಿರುದ್ಧ ಬ್ರಹ್ಮಾದಿ ತೃಣ ಜೀವರೊಳಗೆ ವ್ಯಾಪ್ತನಿರ್ಲಿಪ್ತನಾಗಿ ತೋರಿ ತೋರದಲೆ ನಿಮಿಷಮಾತ್ರ ಬಿಟ್ಟು ಇರದೇ 'ಏಕೋ ನಾರಾಯಣ' ಚತುರ್ದಶ ಲೋಕಕ್ಕೆ ಒಡೆಯ ಒಬ್ಬನೇ 'ಏಕೋ ನಾರಾಯಣಃ ನ ದ್ವಿತೀಯಃ' ಎಂಬ ಶ್ರುತಿ ಪ್ರತಿಪಾದ್ಯನಾಗಿ ಸರುವರಂತರ್ಯಾಮಿಯಾಗಿ ಇರುತಿಪ್ಪನೆಂಬುದೆ ಫಲವಿದು ಬಾಳ್ದುದಕೆ.

ಅನಲಾಂಗಾರ ಅನಲ(ಳ)-ಬೆಂಕಿ. ಅಂಗಾರದಲಿ-ಇದ್ದಿಲಲ್ಲಿ, ಏಕೋನಾರಾಯಣ ಶ್ರುತಿ-'ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ' ಎಂಬ ಶ್ರುತಿಯು ಹೇಳುವಂತೆ 'ಪ್ರಳಯಕಾಲದಲ್ಲಿ—ಬ್ರಹ್ಮನಾಗಲೀ ರುದ್ರಾದಿಗಳಾಗಲೀ ಯಾರೂ ಇಲ್ಲದವೇಳೆಯಲ್ಲಿ—ತಾನೊಬ್ಬನೇ ಇದ್ದ ನಾರಾಯಣ ಎಂದರ್ಥ; ಇದರಿಂದ ಅವನು ಸ್ವತಂತ್ರನೆಂದೂ ಅನಾದಿನಿತ್ಯನೆಂದೂ ಹೇಳಿದಂತಾಯಿತು.

(ಭೀ.) 'ಅನಲಾಂಗಾರದಲಿ ಇಪ್ಪೋಪಾದಿಲಿ' ಎಂದು ಹೇಳಿದ್ದು ೧೨ನೇ ನುಡಿ ಯಲ್ಲಿ ಹೇಳಿದ 'ಇಂಧನಗತ ಪಾವಕನಂತಿಹ' ಎಂಬುದಕ್ಕೆ ಸಮಾಖ್ಯೆಯಾಗಿ (ಸಮಾ ನಾರ್ಥವಾಗಿ) ಇದೆ. (೨) 'ಕ್ಷಣಬಿಟ್ಟಗಲದಲೆ' ಎಂಬುದು 'ದ್ವಾಸುಪರ್ಣಾ ಸಯುಜಾ ಸಖಾಯಾ' ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಪ್ರಮೇಯ, ಜೀವ-ಪರಮಾತ್ಮರು ಪರಸ್ಪರ ಅಗಲದೆ ನಿತ್ಯವಾಗಿರುತ್ತಾರೆ. ಪರಮಾತ್ಮ ಬಿಂಬರೂಪಿ ಯಾಗಿದ್ದಾನೆ, ಜೀವನು ಪ್ರತಿಬಿಂಬ. ಈ ಬಿಂಬ-ಪ್ರತಿಬಿಂಬ ಭಾವವು ಅನಾದಿನಿತ್ಯ ವಾದುದೆಂದು ತಿಳಿಯಬೇಕು.

ಗೃಹಕರ್ಮಾವ ಬ್ಯಾಸರದಲೆ ಪರವೋ ।
ತ್ಸಹದಿ ಮಾಡುತ ಮೂಜಗದ ॥
ಮಹಿತನ ಸೇವೆ ಇದೇ ಎನುತಲಿ ಹರುಷದಿ (ಮೋದದಿ)
ಅಹರಹರ್ಮನದಿ ಸಮರ್ಪಿಸುತಿಪ್ಪುದೆ ॥೧೭॥

ಈ ನುಡಿಯ ಸಂಖ್ಯೆ ಇತರ ಪ್ರಕಾಶನದಲ್ಲಿ ೧೩ ಎಂದಿದೆ.

ಗೃಹ-ದೇಹವು, ಕರ್ಮವ-ದೇಹೇಂದ್ರಿಯಾದಿಗಳಿಂದ ಮಾಡತಕ್ಕ ಕರ್ಮಗಳು ಕಣ್ಣಿನಿಂದ ನೋಡೋಣ, ಕಿವಿಯಿಂದ ಕೇಳೋಣ, ಕೈಯಿಂದ ಮಾಡೋಣ ಇತ್ಯಾದಿ ಇವುಗಳನ್ನು ಮಾಡುವುದರಲ್ಲಿ, ಬ್ಯಾಸರದಲೆ-ಐಹಿಕ ಭೋಗವಿಷಯಗಳಲ್ಲಿ ಹಾಗೂ ಸ್ವಪ್ರಯೋಜನ ಕರ್ಮಗಳಲ್ಲಿ ಬ್ಯಾಸರಿಕೆ ಇಲ್ಲದೇ ಇರೋಣ, ಸ್ವಪ್ರಯೋಜನರಹಿತ ವಾದ ವಿಷಯಗಳಲ್ಲಿ ಬೇಸರಿಕೆಯುಕ್ತವಾಗೋಣ, ಈ ಎರಡೂ ವಿಧ ಲೋಕದಲ್ಲಿ ಕಂಡದೆ, ಹಾಂಗೆ ಇಲ್ಲದೆ ಸರ್ವಕರ್ಮಗಳಲ್ಲಿಯೂ ಬೇಸರರಹಿತನಾಗಿ ಅವುಗಳನ್ನು ಮಾಡುತ, ಮಹಿತನ—ಮಾ-ಲಕ್ಷ್ಮೀ ದೇವರಿಗೆ, ಹಿತನ-ಪತಿಯಾದ ಪರಮಾತ್ಮನ ಸೇವೆ-ಯಾವತ್ತೂ ಕರ್ಮಗಳು, ಯಾವತ್ತೂ ಸೇವೆ ಎಂದೆನುತ, ಅಹರಹ-ಪ್ರತಿ ಪ್ರತಿದಿನದಲ್ಲಿಯೂ, ಮನದಿ-ಮನ ಅಂತರ್ಗತನಾದ ಪರಮಾತ್ಮಗೆ, ಸಮರ್ಪಿಸುತ ಇಪ್ಪುದೇ-ಇರೋದು ದಾವದದೇ ಇದೇ ಬದುಕಿದ್ದಕ್ಕೆ ಫಲ. ಇಂದ್ರಿಯಜನಿತ ಕರ್ಮಗಳು ಸೇವೆಯೆಂದಾಗತಕ್ಕ ಕ್ರಮ, ಅರ್ಪಿತವಾಗತಕ್ಕ ಕ್ರಮವೆಂಬುದರ ದಿಕ್ಪ್ರದರ್ಶನ-ಚರಾಚರಗಳು ಯಾವತ್ತೂ ಪರಮಾತ್ಮಗೆ ಪ್ರತಿಮೆ. ಲೋಕದಲ್ಲಿ ಅಧಿಕಾರಿಗಳು ಭಗವತ್ಪೂಜಾ ಮಾಡಬೇಕಾದರೆ ಪ್ರತಿಮಾಂತರ್ಗತ ಭಗವತ್ಪೂಜಾ ಮಾಡೋದಕ್ಕೆ ಅಧಿಕಾರಿಗಳೇ ಹೊರತು, ಸಾಕ್ಷಾತ್ ಭಗವಂತನ ಪೂಜಾ ಮಾಡೋ ದಕ್ಕೆ ಅಧಿಕಾರವಿಲ್ಲ. ತತ್ ಪೂಜಾದಲ್ಲಿ ಪ್ರತಿಮಾಂತರ್ಗತ ಭಗವಂತನ ಸೇವಾ ಮಾಡುವುದರಲ್ಲಿ ಒಂದೇ ಪ್ರಕಾರ ಸೇವಾ ಅಲ್ಲ. ಅದಕ್ಕೆ ತಾರತಮ್ಯಾನುಸಾರ ವಿಧಿ ಗಳು ಬೇರೆ ಅವೆ, ಅದರ ಅನುಸಂಧಾನುಕ್ರಮ ಕರಚರಣಾದಿ ಅವಯವ ವಿಶಿಷ್ಟವಾದ ಜಡರೂಪವಾದ ವಿಷ್ಣುಪ್ರತೀಕ ತದಂತರ್ಗತ ಭಾರತೀರಮಣ ಮುಖ್ಯ-ಪ್ರಾಣಾಂತರ್ಗತ ಗೋಳಕ ಚಿಂತನೆ ಮಾಡಿ ತದಂತರ್ಗತ ಪರಮಾತ್ಮನ ಚಿಂತನೆ ಮಾಡಿ ಪಂಚಾಮೃತಾದಿ ತುಳಸೀ ಪುಷ್ಪಾದಿಗಳಿಂದ ಪೂಜಾ ಮಾಡತಕ್ಕ ವಿಧಿಯಂತೆ ಲೋಕರು ಮಾಡತಾರೆ, ಅದೂ ಒಂದು ಕರ್ಮ. ಇಂಥಾ ಕರ್ಮ ಭಗವಂತನ ಸೇವಾ ರೂಪ ಆಯಿತು, ಯಾವುದರಿಂದ ಆಯಿತೆಂದರೆ ಅಂತರ್ಗತನ ಭಗವಂತನ ಅನುಸಂಧಾನವಿರೋಣದರಿಂದ ಆಯಿತು. ಈ ವಿಧ ಅನುಸಂಧಾನವಿಲ್ಲದೇ ಹೋದರೆ ಅಂಥ ಕರ್ಮ ಭಗವಂತನ ಸೇವೆಯೆಂದೆನಿಸುವುದಿಲ್ಲ. ತದ್ವತ್ ಸರ್ವ ಅಧಿಷ್ಠಾನದಲ್ಲಿ ಪರಮಾತ್ಮ ಇರೋಣದರಿಂದ ಸರ್ವವೂ ಭಗವತ್ ಪ್ರತೀಕ ಎಂತಲೇ ಕರಿಸತದೆ, ವಸ್ತ್ರ ಪರಮಾತ್ಮಗೆ ಪ್ರತಿಮಾಸದೃಶವಾದದ್ದು, ತದಂತರ್ಗತ ಪರಮಾತ್ಮ

ಸೇವಾ ಎಂಥಾದ್ದೆಂದರೆ ವಸ್ತ್ರಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತನಾಗಿ 'ವಸ್ತ್ರ' ವಾಚ್ಯನಾಗಿ ಪರಮಾತ್ಮ ಇದ್ದಾನೆ ಎಂದು ತಿಳಿದು ಆ ವಸ್ತ್ರವನ್ನು ಶುಭ್ರವಾಗುವಂತೆ ಒಗೆಯೋಣ ದಾವದದೆ ಇದೇ ಕರ್ಮ, ಪರಮಾತ್ಮನ ಸೇವಾ ರೂಪವಾಯಿತು, ವ್ಯರ್ಥವಾಗಲಿಲ್ಲ. ಈ ನ್ಯಾಯದಿಂದ ಸರ್ವತ್ರ ಅನುಸಂಧಾನ ಮಾಡಬೇಕು. ಇಂಥಾ ಅನುಸಂಧಾನದಿಂದ ವ್ಯರ್ಥಕರ್ಮ ದಾವದೂ ಆಗದೇ ಸರ್ವ ಕರ್ಮವೂ ಭಗವಂತನ ಸೇವಾನೇ ಆಗತದೆ. ಆದ್ದರಿಂದ ಈ ರೀತ್ಯಾ ಗೃಹದ ಕರ್ಮಗಳನ್ನು ಬ್ಯಾಸರಿಯದೇ ಮಾಡತಾ ಅತ್ಯಂತ ಉತ್ಸಾಹದಿಂದ ಮಾಡತಾ ಬಂದರೆ ಹರಿಯು ಸುಪ್ರೀತನಾಗಿ, ಮೂಜಗದ-ಅವರವರ ಅಧಿಷ್ಠಾನುಸಾರ ಪರ್ಯವಸಾನಕ್ಕೆ ಲಿಂಗಭಂಗ ಐದಿಸಿ, ಮೂರುಜಗಶ್ವೇತದ್ವೀಪ, ಅನಂತಾಸನ, ವೈಕುಂಠ ಲೋಕ ತ್ರಯಗಳ, 'ದ'-ಕೊಡುವವನಾಗತಾನೆ. ಈ ಪ್ರಕಾರ ಅನುಸಂಧಾನದಿಂದ (ಮಾಡಿದ) ಸರ್ವ ಕರ್ಮಗಳು, ಮಹಿಂತನ-ಲಕ್ಷ್ಮೀಪತಿಯ ಸೇವಾ ಎಂದು ಪ್ರತಿಪ್ರತಿ ದಿವಸಗಳಲ್ಲಿ, ಮನದಿ-ಬಾಯಿಂದ ಉಚ್ಚಾರ ಮಾಡೋಣವೇ (ಮಾತ್ರ) ಪ್ರಯೋಜನವಲ್ಲ. ಆದರೆ ದೃಢಮನದ ಅನುಸಂಧಾನದಿಂದ ಮಾಡತಾ ಬಾಹ್ಯದಲ್ಲಿ ತೋರದೇ ಮನೋಂತರ್ಗತ ಭಗಂತನಿಗೆ ಅರ್ಪಿಸತ ಇರೋಣ ದಾವದದೇ ಅದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು) ಗೃಹಕರ್ಮವ-ಮನಿವಳಿಗೆ ಮಾಡೋ ಕೆಲಸಗಳನ್ನು ಸತಿಸುತರಾಲಯುಗಳ ರಕ್ಷಣೆಮಾಡೋ ಕರ್ಮಗಳ, ಬ್ಯಾಸರದೆ-ಬ್ಯಾಸರ ಹಚ್ಚಿಕೊಳ್ಳದೆ ಪರಮೋತ್ಸಹದಿ ಮಾಡುತ-ಕೇವಲ ಸಂತೋಷವುಳ್ಳವನಾಗಿ ಜ್ಞಾನಾನಂದದಿಂದ ಮಾಡತ, ಎಂದರೆ ಈ ಪಾಂಚಭೌತಿಕ ಶರೀರ ಶ್ರೀರಮಣನ ಅರಮನೆಯೆಂದು ತಿಳಿದು ಮನ ಮೊದಲಾದ ಏಕಾದಶೇಂದ್ರಿಯಗಳಿಂದಾಗೋ ಕರ್ಮಗಳು-ತದ್ವಿವರ—ಸ್ನಾನಾದಿ ಕರ್ಮಗಳು ಗೃಹ ಸಮ್ಮಾರ್ಜನ, ಇಂದ್ರಿಯಗಳು ಸಾಲದೀವಿಗಿ, ವಿಷಯಗಳ ಸಮ್ಮೇಳನ ಶ್ರೀಹರಿಗೆ ಪರಿಯಂಕವ ಮಾಡಿ ವಿಷಯಗಳಿಂದನುಭೋಗಿಸುವದು ಸ್ವಾಮಿಗೆ ಸುಪ್ಪತ್ತಿಗೆ, ದೇಹಸಮರ್ಪಣವೇ ಶ್ರೀಹರಿಗೆ ಶುಭವಸ್ತ್ರ-ವಸನ, ಪಾಪ ಕರ್ಮಗಳು-ಸರ್ವೇಶ್ವರ ಪದಕಮಲಗಳಿಗೆ ಪಾದುಕಗಳು, ಸಮೀಚೀನವಾದ ಪುಣ್ಯ ಕರ್ಮಗಳು ಶ್ರೀಗೋಪಾಲಕೃಷ್ಣಗೆ ಗಂಧಾನುಲೇಪನ, ವದನ ಜಿಹ್ವಾಗಳಿಂದ ಶಾಸ್ತ್ರಾಲಾಪವವೇ ಶ್ರೀಹರಿಗೆ ತುಲಸೀ, ಮನೋವೃತ್ತಿಗಳು ಪುಷ್ಪ, ಕ್ರೋಧವೆಂಬುದೇ ಸ್ವಾಮಿಯ ಪಾದಗಳಿಗೆ ಧೂಪಾರ್ತಿ, ಭಕ್ತಿಯೇ ಅಲಂಕಾರ, ಬುದ್ಧಿ-ಆದಿ ಛತ್ರ, ಸುಜ್ಞಾನವೇ ನಂದಾದೀವಿಗೆ, ಸುಭೋಜನವೇ ಸ್ವಾಮಿಗೆ ನೈವೇದ್ಯ, ನಾರಾಯಣನ ಗುಣಕಥನ ಶ್ರೀರಮಾಪತಿಗೆ ಮಂಗಳಾರತಿ, ಮನಸು ಸಂಚಾರ ಮಾಡುವದು ಕಾಯಾವಾಚಾಮನಸಾ ಪ್ರದಕ್ಷಿಣೆ—ಈ ಪ್ರಕಾರ ನಿತ್ಯನಿತ್ಯದಲ್ಲಿ ಗೃಹ ಕರ್ಮವ ಬ್ಯಾಸರದೆ ಮಾಡತ ಶ್ರೀಪದ್ಮನಾಭಗೆ ಸರ್ವಸಮರ್ಪಣ ಮಾಡತ

ಪರಮಾನಂದದಿಂದ ಮಾಡತ ಸತ್ವರಜಸ್ತಮ ತ್ರಿವಿಧಜೀವರು ಜಗತ್ತಿನಿಂದಾಗೋ ಮಹಿಮೆಗೆ ಶ್ರೀನಾರಾಯಣನೇ ಕರ್ತ, ಭೂಜಲಖೇ-ತ್ರಿವಿಧ ಜಗತ್ತಿಗೆ, ಮಹಿತ-ತ್ರಿವಿಧ ಜೀವರಿಂದ ತ್ರಿಜಗತ್ತಿನಲ್ಲಿ ಸ್ತೋತ್ರ ಮಾಡಿಸಿಕೊಂಬುವಂಥ ತ್ರಿಭುವನೇಶಾರಾಧ್ಯ ಶ್ರೀನಾರಾಯಣಗೆ ಸೇವಾ ಇದೆಂದು ಭಕ್ತಿಪುರಸ್ಸರ ಶ್ರೀಹರಿಯ ಸೇವಾ ಮಾಡತ, ಅಹರಹರ್ಮನದಿ ಸಮರ್ಪಿಸುತಿಪ್ಪುದೆ-ಅಹರ್ನಿಶಿ ಆಗೋ ಕರ್ಮಗಳ ಸಮೀಚೀನವಾದ ಜ್ಞಾನದಿಂದ ಅಂತರ್ನಿಷ್ಠಾವುಳ್ಳವನಾಗಿ ಸಮರ್ಪಣ ಮಾಡುವದೇ ಫಲವಿದು ಬಾಳ್ದುದಕೆ.

ಮಹಿತನ (ಮಹಪೂಜಾಯಾಂ ಎಂಬ ಧಾತುವಿನ ರೂಪ) ಪೂಜ್ಯನಾದ ಶ್ರೀಹರಿಯ ಮೋದದಿ-ಸಂತೋಷದಿಂದ. ಅಹರಹರ್ -ಪ್ರತಿನಿತ್ಯ. ದಿನೇ ದಿನೇ,

(ಭೀ) (೧) ಗೃಹಕರ್ಮವ ಎಂದರೆ ಗೃಹಸ್ಥಧರ್ಮಗಳನ್ನು ಅಥವಾ ತನ್ನನ್ನು ಆಶ್ರಯಿಸಿದ ದಾರಾಪುತ್ರಾದಿಗಳ ರಕ್ಷಣೆಯನ್ನು (೨) ಪರಮೋತ್ಸಹದಿ-'ಏತಾದೃಶೋಽಪಿ ನಾ ಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್' ಎಂಬ ಹರಿವಂಶ ಪ್ರಮಾಣಾನುಸಾರ ಮೂರು ಲೋಕಗಳನ್ನು ರಕ್ಷಿಸಲು ಸಮರ್ಥನಾದ ಮಹಾ ಜ್ಞಾನಿಯೂ ಕೂಡ ಶ್ರೌತ-ಸ್ಮಾರ್ತ ಸದಾಚಾರಗಳನ್ನು ಬಿಡಬಾರದೆಂದು ನಿಷೇಧಿಸಿರುವುದರಿಂದಲೂ 'ವಿಹಿತತ್ವಾಚ್ಚಾಶ್ರಮ ಕರ್ಮಾಪಿ' ಎಂಬ ಬ್ರಹ್ಮಸೂತ್ರದಂತೆ ವರ್ಣಾಶ್ರಮ ಧರ್ಮಾನುಷ್ಠಾನವು ಅತ್ಯವಶ್ಯಕವಾದ್ದರಿಂದಲೂ ಅವುಗಳನ್ನು ಶ್ರದ್ಧೆಯಿಂದ ಆಚರಿಸುವುದೇ ಬಾಳಿದ್ದಕ್ಕೆ ಸಾರ್ಥಕವೆಂದು ಭಾವ, (೩) ಸಮರ್ಪಿಸುತಿಪ್ಪುದೇ-ಭಾಗವತದಲ್ಲಿ (೧೧-೨-೩೬) ಹೇಳಿದಂತೆ 'ಕಾಯೇನ ವಾಚಾ ಮನಸೇಂದ್ರಿಯೈರ್ವಾ, ಬುದ್ಧ್ಯಾತ್ಮನಾ ವಾನುಸೃತಃ ಸ್ವಭಾವಮ್। ಕರೋತಿ ಯದ್ಯತ್ ಸಕಲಂ ಪರಸ್ಮೈ, ನಾರಾಯಣಾಯೇತಿ ಸಮರ್ಪಯೇತ್ತತ್ ॥' ಬೆಳಗಿಂದ ಸಂಜೆಯವರೆಗೂ ಪುನಃ ಸಂಜೆಯಿಂದ ಬೆಳಗಿನವರಗೆ ಮಾಡಿದ ಸಮಸ್ತ ಚೇಷ್ಟೆ (ಕಾರ್ಯ)ಗಳನ್ನೂ ಭಗವಂತನ ಸೇವೆಯೆಂದು ತಿಳಿದು ಅವನಲ್ಲಿ ಸಮರ್ಪಿಸಬೇಕು, (ಅದಕ್ಕೇ ನಾವು ಹಾಸಿಗೆಯಿಂದ ಏಳುವಾಗಲೇ "ಪ್ರಾತಃಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂತತಃ । ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್॥" ಎಂದು ಹೇಳಿಕೊಳ್ಳಬೇಕೆಂಬುದು ಪ್ರಾಚೀನ ಸಂಪ್ರದಾಯ.)

**ಹರಿಕಥೆ ಪರಮಾದರದಲಿ ಕೇಳುತ ।**
**ಮರೆದು ತನುವ ಸುಖ ಸುರಿವುತಲೀ ॥**

**ಉರುಗಾಯನ ಸಂದರುಶನ ಹಾರೈ ।**
**ಇರುಳು ಹಗಲು ಜರಿಜರಿದು ಬಳಲುವದೆ** (ಬಾಳುವದೆ) ॥೧೨॥

(ಈ ನುಡಿ ಕೆಲವು ಗ್ರಂಥಗಳಲ್ಲಿ ೧೭ ಎಂದೂ ಇನ್ನು ಕೆಲವೆಡೆ ೧೯ ಎಂದೂ ಇವೆ)

**ಹರಿ**=ಬಿಂಬರೂಪಿ ಹರಿ, **ಕಥೆ**=ದೇಹೇಂದ್ರಿಯಾದಿಗಳಲ್ಲಿದ್ದು, ಬಿಂಬ ಕ್ರಿಯಾದ್ವಾರಾ, ದೇವತಾಕ್ರಿಯಾ, ತದ್ವಾರಾ ಜೀವ, ಜೀವದಿಂದ ದೇಹ, ಈ ದೇಹ ದ್ವಾರಾ ಪರಮಾತ್ಮ ಮಾಡಿಸತಕ್ಕ ವ್ಯಾಪಾರರೂಪವಾದ ಕಥಾವನ್ನು, **ಪರಮಾದರ ದಲಿ**=ಪರಮಾದರದಿಂದ, ಗುರುಗಳ ಮುಖದಿಂದ, ಸ್ವೋತ್ತಮರ ಮುಖದಿಂದಲೂ ಕೇಳುವವನಾಗು. ಈ ಪ್ರಕಾರ ಕೇಳುತ, **ಮರೆದು ತನುವ**=ನಾನು, ನನ್ನದು ಎಂಬ ಅಭಿಮಾನ ಮರೆಯುವವನಾಗುತಾ, ಅಹಂ–ಮಮ ಎಂಬುವುಗಳನ್ನು ಮರೆತವ ನಾಗಿ ಬಿಂಬಕ್ರಿಯಾದ್ವಾರಾ ಪ್ರತಿಬಿಂಬಕ್ರಿಯಾ ಎಂಬುದನ್ನು ಸ್ಮೃತಿಯೊಳಗಿಟ್ಟವ ನಾಗಿ, **ಸುಖ ಸುರಿವುತಲೀ**=ಮನ ಇಂದ್ರಿಯದ್ವಾರಾ (ಉಳಿದ) ದಶೇಂದ್ರಿಯ ಗಳಲ್ಲಿ ಸುಖರೂಪವಾದ ಮಳೆಯನ್ನು ಸುರಿಸುತ ಎಂದರೆ, ಈ ವಿಧ ಅನುಸಂಧಾನ ದಿಂದ ಮನಸ್ಸು ದುಃಖರೂಪವಾದ ಅಹಂ–ಮಮತಾದಿಗಳಲ್ಲಿ ಪ್ರವೇಶ ಮಾಡದೇ ಪರಮಾತ್ಮನಲ್ಲಿ ಲಗ್ನವಾಗುತದೆ. ಇದರಿಂದ ಮನಸ್ಸು ಸುಖವನ್ನು ಐದುತದೆ. ಮನಸ್ಸು ಹೊರತು ದಶೇಂದ್ರಿಯುಗಳಲ್ಲಿ ವ್ಯಾಪಾರವಿಲ್ಲ. ಇಂಥ ಸುಖರೂಪವಾದ ಮನಸ್ಸು ದಶೇಂದ್ರಿಯುಗಳಲ್ಲಿ ಪ್ರವೇಶ ಮಾಡಿ, ಮಾಡತಕ್ಕ ಎಲ್ಲಾ ವ್ಯಾಪಾರಗಳೂ ಸುಖರೂಪಗಳೇ. ಈ ರೀತಿಯಾಗಿ ದಶೇಂದ್ರಿಯುಗಳಲ್ಲಿ ಮನೋದ್ವಾರಾ ಸುಖ ರೂಪಗಳೇ, ಈ ರೀತಿಯಾಗಿ ದಶೇಂದ್ರಿಯುಗಳಲ್ಲಿ ಮನೋದ್ವಾರಾ ಸುಖರೂಪವಾದ ಮಳೆಗರಿಸುತಾ, **ಉರುಗಾಯನ**=ಉತ್ಕೃಷ್ಟವಾದ ಮುಕ್ತರು ಗಾನಮಾಡತಕ್ಕ ಸಾಮವೇದವು, ಮುಕ್ತರಿಂದ ಸಾಮವೇದದಿಂದ ಗಾಯನ ಮಾಡಿಸಿಕೊಳತಕ್ಕ, ದೇಹಾಂತರ್ಗತನಾದ ಬಿಂಬರೂಪೀ ಪರಮಾತ್ಮನ, **ಸಂದರುಶನ**=ಅಪರೋಕ್ಷವನ್ನು, **ಹಾರೈಸಿ**=ಅಪೇಕ್ಷೆಮಾಡಿ, **ಇರಳು ಹಗಲು**=ರಾತ್ರಿ ಹಗಲೂ, **ಜರಿ ಜರಿದು**= ಪ್ರಾಕೃತ ವಿಷಯಾದಿ ಭೋಗಗಳನ್ನು ಕ್ರಮಕ್ರಮವಾಗಿ ಬಿಡತ ಬಿಡತ, ಪೂರ್ವೋಕ್ತ ಅನುಸಂಧಾನಪೂರ್ವಕ ಕ್ರಮಕ್ರಮವಾಗಿ ಆಚರಿಸತ, **ಬಳಲುವದೆ**=ಆ ಅನು ಸಂಧಾನದ ಪೂರ್ತಿ ಸಿದ್ಧಿಗೋಸುಗ ಚಿತ್ತವನ್ನು ಖೇದಪಡಿಸಿ ಬಳಲೋಣ ದಾವದದೆ, ಹಾಗೆ ಇರೋಣ ದಾವದದೆ ಇದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು) ಶ್ರೀನರಹರಿಕಥಾಮೃತಸಾರವನ್ನ ಹರಿಸರ್ವೋತ್ತಮ ಜ್ಞಾನಪುರಸ್ಸರ ಆದರದಿಂದ ಶ್ರವಣ ಮಾಡತಾ ಆನಂದ ಉನ್ಮಾಹವುಳ್ಳವನಾಗಿ ಶರೀರ ಎಚ್ಚರತಪ್ಪಿ ಚಿತ್ಸ್ವರೂಪ ಸುಖೋದ್ರೇಕವುಳ್ಳವನಾಗಿ ಪರಲೋಕ ಸುಖ ಅನುಭವಿಸತ ಉತ್ಕೃಷ್ಟ ಮಹಾಪರಾಕ್ರಮಶಾಲಿಯಾದ ಅಥವಾ ಉತ್ಕೃಷ್ಟ ಸಾಮಗಾಯನಲೋಲನಾದ

ಶ್ರೀರಮಾಧವನ ದರ್ಶನಾಪೇಕ್ಷೆಯನ್ನ ಹಾರೈಸಿ–ಇಚ್ಛೆವುಳ್ಳವನಾಗಿ ಅಹರ್ನಿಶಿ ತದೇಕಧ್ಯಾನವುಳ್ಳವನಾಗಿ ಪರಮಾತ್ಮನ ಸ್ಮರಣೆಯಲ್ಲಿ ಆಸಕ್ತನಾದಿ ರಾತ್ರಿಹಗಲು ಕಳೆಯುತ ಬಾಳುವದೆ ಫಲವಿದು ಬಾಳ್ದುದಕೆ,

'ಉರುಗಾಯನ' ಎಂಬುದು ವೈದಿಕ ಪ್ರಯೋಗ; ಋಗ್ವೇದದಲ್ಲಿ 'ಉರು-ಗಾಯೋ ನಮಸ್ಯಃ' 'ಉರುಗಾಯಸ್ಯ' ಮೊದಲಾದ ಪ್ರಯೋಗಗಳು ಬಂದಿವೆ. ಇಲ್ಲಿ 'ಉರು'–ಶ್ರೇಷ್ಠರಾದ ರಮಾಬ್ರಹ್ಮಾದಿಗಳಿಂದ, 'ಗಾಯ'–ಗಾನಮಾಡಲ್ಪಡುವ, ಸ್ತುತ್ಯನಾದ ಎಂಪರ್ಥ. ಒಟ್ಟಿನಲ್ಲಿ 'ಉರುಗಾಯನ' ಎಂದರೆ ರಮಾಬ್ರಹ್ಮಾದಿ ವಂದ್ಯನಾದ ನಾರಾಯಣನ ಎಂದರ್ಥ. ಇರಳು–ರಾತ್ರಿ. ಜರಿಜರಿದು–ತಮೇವೈಕಂ ಜಾನಥ ಅನ್ಯಾವಾಚೋ ವಿಮುಂಚಥ' ಎಂಬ ಶ್ರುತಿ ಹೇಳುವಂತೆ ಭಗವದಿತರ ವಿಷಯಗಳನ್ನು ತ್ಯಜಿಸಿ–ತ್ಯಜಿಸಿ–ದೂರ ದೂರಮಾಡಿ ಎಂದರ್ಥ.

(ಟೀ) ಉರುಗಾಯನ ಸಂದರುಶನ ಹಾರೈಸಿ–ಎಂದರೆ ಭಗವಂತನ ಅಪರೋಕ್ಷ ಜ್ಞಾನವನ್ನು ಬಯಸಿ ಎಂದರ್ಥ. ಏಕೆಂದರೆ ಅಪರೋಕ್ಷಜ್ಞಾನವಿಲ್ಲದೆ ಮೋಕ್ಷವಿಲ್ಲ, ಅದರಿಂದಲೇ ಮೋಕ್ಷ ನಿಯತವಾಗಿ ದೊರಕುವುದೆಂಬ ವಿಷಯವು 'ಯೇಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಯಃ' ಎಂಬ ಬ್ರಹ್ಮತರ್ಕ-ವಚನದಿಂದ ಸಿದ್ಧವಾಗಿದೆ. ಇದನ್ನೇ 'ವಿಜ್ಞಾತಮೇತತ್ ಸರ್ವೇಷಾಂ ಮುನೀನಾಂ ಬ್ರಹ್ಮದರ್ಶನಾತ್ । ಸ್ಯಾದೇವ ಮೋಕ್ಷೋ ನಾನ್ಯಸ್ಮಾತ್ ಇತಿ ತತ್ರಾಪಿ ಚಿತ್ರತಾ॥' ಎಂಬ ಭವಿಷ್ಯತ್ಪರ್ವವಾಕ್ಯವೂ ಸಮರ್ಥಿಸುತ್ತದೆ.

ಬಿಗಿದ ಕಂಠದಿಂ ದೃಗ್ಬಾಷ್ಪಗಳಿಂ
ನಗೆ (ಗು) ಮೊಗದಿಂ ರೋಮಾಂಚಗಳಿಂ,
(ರೋಮಗಳುಗಿದು ರೋಮಗಳೊಗೆದು) ।
ಮಿಗೆ ಸಂತೋಷದಿಂ ನೆಗೆದಾಡುತ ನಾ ।
ಲ್ಮೊಗನೈಯ್ಯನ ಗುಣಪೊಗಳಿ ಹಿಗ್ಗುವದೆ ॥೧೯॥

(ಬೇರೆ ಕೆಲವೆಡೆ ಈ ನುಡಿಯನ್ನು ೧೧ ನೆಯದಾದಿ ಪರಿಗಣಿಸಿದೆ)

ವಿಷಯಾದಿಗಳಲ್ಲಿ ಆಶಾತ್ಯಾಗವ ಮಾಡಿಸಿದರೆ ಸರ್ವ ಆಶಾ ಪರಮಾತ್ಮನಲ್ಲಿ ಇರೋಣವಾಗತದೆ. ಆದರಿಂದ ಹರಿಯ ಅದ್ಭುತಮಹಿಮೆ ಮನಸ್ಸಿಗೆ ಹೊಳೆಯುವ ದಾಗತದೆ, ಆದರಿಂದ ಅತ್ಯಂತ ಆನಂದದಿಂದ ಪರಮಾತ್ಮನ (ರೂಪ ನಾಮ ಗುಣ ಗಳನ್ನು) ಹೊಗಳುವುದಕ್ಕೆ ಕಾರಣವಾಗಿ, ಹೊಗಳಲಿಕ್ಕೆ ಉಪಕ್ರಮ ಮಾಡಿದ ಕಾಲ ದಲ್ಲಿ ಕೇರಸ್ವರ ಹೊರಗೆ ಬಾರದಂತೆ ಕಂಠಮಧ್ಯದಲ್ಲಿ ಬಿಗಿಯೋದಾಗತದೆ. ಆನಂದೋದ್ರೇಕದಿಂದ ನೇತ್ರದಲ್ಲಿ ಆನಂದೋದಕ ಸ್ರವಿಸೋದಾಗತದೆ, ದೇಹಗತ

ರೋಮಗಳು ಎದ್ದು ನಿಲ್ಲತವೆ, ಇಂಥಾ ಲಕ್ಷಣಗಳು ಉಂಟಾಗತವೆ. ಪೂರ್ವೋಕ್ತ ಅನುಸಂಧಾನ(ಅದರ ಸಾಧನೆಯಿಂದ ಬೆಳೆಯುತಾ) ಅನುಭವಕ್ಕೆ ತಂದುಕೊಂಡು ಆನಂದೋದ್ರಿಕ್ತನಾಗಿ ಬಿಗಿದ ಕಂಠದಿಂದಲೂ. ಆನಂದಬಾಷ್ಪಗಳಿಂದಲೂ ಯುಕ್ತನಾದ ನೇತ್ರಗಳಿಂದಲೂ, **ನಗೆಮೊಗದಿಂ**=ಸರ್ವದಾ ಹಸನ್ಮುಖನಾಗಿ, ಪ್ರಸನ್ನಚಿತ್ತನಾಗಿ ರೋಮಾಂಚಿತನಾಗಿ, **ಮಿಗೆ ಸಂತೋಷದಿಂ**=ವಿಷಯಾದಿಗಳ ಭೋಗಜನಿತ ಸಂತೋಷಕ್ಕಿಂತಲೂ ಅತ್ಯಂತ (ಸಾತ್ವಿಕ) ಸಂತೋಷಪರವಾದದ್ದು ಭಗವನ್-ಮಾಹಾತ್ಮ್ಯ ಭೋಗಜನಿತ ಸಂತೋಷ ಎಂತ ತಿಳಿದು ಅತ್ಯಂತ ಆನಂದಯುಕ್ತನಾಗಿ, **ನಾಲ್ಮೊಗನಯ್ಯನ**=ಚತುರ್ಮುಖಬ್ರಹ್ಮನ ತಂದೆ! ವಾಸುದೇವನ **ಗುಣಗಳ**=ಸೃಷ್ಟ್ಯಾದಿ ಮಹಿಮೆಗಳ, **ಪೊಗಳಿ ಹಿಗ್ಗುವದೆ**=ಕ್ಷಣಕ್ಷಣಕ್ಕೆ ಆನಂದಯುಕ್ತನಾಗಿ ಹೊಗಳತಾ ಹಿಗ್ಗೋಣ ದಾವದದೆ ಅದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು) ಶ್ರೀನಾರಾಯಣನ ಮಂಗಳಗುಣಸ್ತವನ ಮಾಡುವಾಗ ಕಂಠಶಿರ-ಗಳುಬ್ಬಿಸಿಕೊಂಡು ನಯನೇಂದ್ರಿಯದಿಂದ ಆನಂದಬಾಷ್ಪೋದಕವುಳ್ಳವನಾದಿ ಹಸನ್ಮುಖಿಯಾಗಿ ರೋಮಾಂಚನಗಳುಬ್ಬಿಸಿಕೊಂಡು ಹರಿಸ್ಮರಣಪೂರ್ವಕ ಆನಂದೋದ್ರೇಕ ಮನಸ್ಸುಳ್ಳವನಾಗಿ ನಾರಾಯಣಗೆ ಅಭಿಮುಖವಾಗಿ ನರ್ತನಮಾಡತ ಬ್ರಹ್ಮನ ಪಿತನಾದ ಭಗವಂತನ ಮಂಗಳಗುಣಗಳ ಸ್ತೋತ್ರ ಮಾಡತಾ ಸ್ವರೂಪಸುಖವುಳ್ಳವನಾಗಿ ಆನಂದದಿಂದ ಸಂತೋಷಪೂರ್ಣನಾಗುವದೇ ಫಲವಿದು ಬಾಳ್ದುದಕೆ.

ಬಿಗಿದ ಕಂಠದಿಂ-ಆನಂದೋದ್ರೇಕದಿಂದ ಗದ್ಗದ ಕಂಠನಾಗಿ. ದೃಕ್-ಕಣ್ಣು. ಬಾಷ್ಪ-ಕಣ್ಣೀರು, ಅಶ್ರು, ರೋಮಗಳುಗಿದು-ರೋಮಾಂಚಿತನಾಗಿ, ಮಿಗೆ—ಹೆಚ್ಚು, ಅಧಿಕ.

(ಭೀ.) ವಿಷ್ಣುಭಕ್ತರಲ್ಲಿ ಪಕ್ವಭಕ್ತರು, ಪಕ್ವಕಲ್ಪರು, ಸಾಧಕರು ಎಂದು ಮೂರು ವಿಧವುಂಟು. ಆ ಪೈಕಿ ಇಲ್ಲಿ ಹೇಳಿರುವುದು ಪರಿಪಕ್ವಭಕ್ತರ ಲಕ್ಷಣ. ಸಾಧಕರಲ್ಲಿ ಈ ಲಕ್ಷಣಗಳು ಹೆಚ್ಚಾಗಿ ಕಾಣುವುದಿಲ್ಲ. ಭಾಗವತದಲ್ಲಿ "ವಾಗ್‌ಗದ್ಗದಾ ದ್ರವತೇ ಯಸ್ಯ ಚಿತ್ತಂ, ರುದತ್ಯಭೀಕ್ಷ್ಣಂ ಹಸತಿ ಕ್ವಚಿಚ್ಚ । ವಿಲಜ್ಜ ಉದ್ಗಾಯತಿ ನೃತ್ಯತೇ ಚ ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥" ಎಂಬ ಶ್ಲೋಕದ ಭಾವಾನುವಾದವೇ ಈ ನುಡಿ. [ಈ ಲಕ್ಷಣ ಪ್ರಹ್ಲಾದ, ನಾರದಾದಿ ಮಹಾವಿಷ್ಣುಭಕ್ತರಲ್ಲಿ ಮಾತ್ರ ಎದ್ದು ಕಾಣುತ್ತದೆ. ಈ ಲಕ್ಷಣ ಕಾಣದ ಮಾತ್ರಕ್ಕೆ ಅವರು ಭಕ್ತರಲ್ಲವೆಂದೂ ಹೇಳುವಂತಿಲ್ಲ.]

**ಆ ಪರಮಾತ್ಮಗೆ ರೂಪದ್ವಯವು ಪ ।**
**ರಾಪರ ತತ್ವಗಳಿದರೊಳಗೆ ॥**

**ಸ್ತ್ರೀ ಪುಂ ಭೇದದಿ ಈ ಬ್ರಹ್ಮಾಂಡದಿ (ಪದ್ಮಾಂಡದಿ/ಪದ್ಮಜಾಂಡವ) ।**
**ವ್ಯಾಪಿಸಿಹನಿಂದೀಪರಿ ತಿಳಿವುದೆ ॥೨೦॥**

(ಈ ನುಡಿ ಕೆಲವೆಡೆ ೧೮ ಎಂದೂ ೧೪ ಎಂದೂ ಇದೆ)

ಆ = ಪೂರ್ವೋಕ್ತನಾದ ತ್ರಿವಿಧ ಜೀವಾಂತರ್ಗತನಾದ, ಪರಮಾತ್ಮಗೆ-ಭಗವಂತಗೆ, ರೂಪದ್ವಯವು = ಎರಡು ಪ್ರಕಾರ ರೂಪಗಳು, ಪರಾಪರತತ್ವಗಳು = ಪರತತ್ವ ಎಂಬುದು ವೈಕುಂಠಾದಿ ನಿತ್ಯ ಸ್ಥಾನತ್ರಯಗಳು, ಅಪರತತ್ವ-ತದನ್ಯವಾದ ಅನಿತ್ಯವಾದ ತತ್ವ, ಭೂರಾದಿ (೧೪) ಹದಿನಾಲ್ಕು ಲೋಕಗಳು, ಪರತತ್ವದಲ್ಲಿ ತದಾಕಾರನಾಗಿ ವ್ಯಾಪ್ತನಾಗಿ ಪರತತ್ವನಾಮ ವಾಚ್ಯನಾಗಿ, ಅಪರತತ್ವದಲ್ಲಿ ತದ್ವಾಚ್ಯನಾಗಿಯೂ ಕರೆಸುವವನಾಗಿ ಈ ಪ್ರಕಾರ ಪರಾಪರವಾಚ್ಯನಾಗಿ, ಈ ವಿಧ ಎರಡು ರೂಪಗಳುಳ್ಳವನಾಗಿ* ಇದರೊಳಗೆ ಪರತತ್ವವಾದ ವೈಕುಂಠಾದಿ ತ್ರಯಗಳಲ್ಲಿ ಲಿಂಗಭಂಗರಾದ ನಚಪುನರಾವರ್ತರಾದ ಮುಕ್ತರು ಇರೋವರಾಗಿದ್ದಾರೆ. ಅಪರ ತತ್ವವಾದ ಅನಿತ್ಯ (೧೪) ಹದಿನಾಲ್ಕು ಲೋಕಗಳಲ್ಲಿ ಲಿಂಗಭಂಗರಾಗದ ಲಿಂಗದೇಹ-ಬದ್ಧರಾದ ಅಮುಕ್ತಜೀವರು ಇದ್ದಾರೆ. ಇದರೊಳಗೆ ಸ್ತ್ರೀ ಪುಂ = ಪೂರ್ವೋಕ್ತ. ಜೀವರ ಸ್ವರೂಪ ಅನಾದಿಯಿಂದ ಸ್ತ್ರೀಜೀವರು ಎಂತಲೂ, ಪುರುಷಜೀವರೆಂತಲೂ ಭೇದದಿಂದ ಇರೋವರಾಗಿದ್ದಾರೆ, ಸ್ವರೂಪತಃ ನಪುಂಸಕಜೀವರಿಲ್ಲ. ಕರ್ಮವಶಾತ್ ಸ್ಥೂಲದೇಹಗಳ ಹೊಂದಿ, ಆ ಸ್ಥೂಲದೇಹಕ್ಕೆ ನಪುಂಸಕತ್ವ ಪ್ರಾಪ್ತವಾಗಿ ನಪುಂಸಕರೆಂದು ವ್ಯವಹರಿಸಲ್ಪಡತಾರೇ ಹೊರತು ಸ್ವರೂಪತಃ ನಪುಂಸಕರಲ್ಲ. ಅನಾದಿಭೂತವಾದ ಸ್ತ್ರೀರೂಪ ಕೆಟ್ಟು (ಬದಲಾಗಿ) ಪುರುಷನಾಗೋಣಿಲ್ಲ. ಪುರುಷರೂಪ ಕೆಟ್ಟು ಸ್ತ್ರೀರೂಪವೂ ಆಗೋಣಿಲ್ಲ. ಅನಾದ್ಯನಂತ ಕಾಲಕ್ಕೂ ಹಾಂಗಾಂಗೇ ಇರತವೆ. ಅನಾದಿ ಸ್ವರೂಪ ದೇಹಗಳನ್ನು ದೇವರು ಅನ್ಯಥಾ ಮಾಡೋ ಇಚ್ಛ್ಯಾನೇ ಮಾಡೋದಿಲ್ಲ. ಈ ನಿಯಮ ಸ್ವರೂಪಕ್ಕೆ, ಸ್ಥೂಲ ದೇಹಗಳಿಗಾದರೋ ಕರ್ಮವಶಾತ್ ಸ್ತ್ರೀಗೆ ಪುರುಷದೇಹವೂ, ಪುರುಷಗೆ ಸ್ತ್ರೀ ದೇಹವೂ ಬರಬಹುದೆ ಎಂಬ ಶಂಕೆಗೆ ಕರ್ಮವಶಾತ್ ಕೂಡ ಹೀಗೆ ಅನ್ಯದೇಹವು ಬರೋಣಿಲ್ಲ. ಯಾಕೆಂದರೆ ಅವರವರ ಅನಾದಿ ಕರ್ಮ ಸ್ವಭಾವದಲ್ಲಿ ಹಾಗೆ ಇರೋಣಿಲ್ಲ ಎಂದು ಉತ್ತರ. ಪಾಪ ಪ್ರಬಲವಿರುವ ಪುರುಷ ನಪುಂಸಕಶರೀರ, ಸ್ತ್ರೀ ಶಿಖಂಡಿಶರೀರ ಹೊಂದುವವರಾಗತಾರೆ. ಗೋಪಿಕಾಸ್ತ್ರೀಯರೂ ಪುರುಷರು ಸ್ತ್ರೀದೇಹ ಐದಿದ್ದಾರಲ್ಲಾ ಎಂದರೆ, ಹಾಗಾದದ್ದು ಅವರ ಕರ್ಮವಶ

---

* ರೂಪದ್ವಯ = ಎರಡು ರೂಪಗಳು: (i) ಬ್ರಹ್ಮಾದಿ ಸರ್ವ ಜೀವರ ಸ್ವರೂಪದಲ್ಲಿಯ ಬಿಂಬರೂಪ ಒಂದು. (ii) ಬ್ರಹ್ಮಾಂಡದಲ್ಲಿಯ ಕಾಲವೆಂಬ ರೂಪವು ಎರಡನೆಯದೆಂದು ಇದೆ. ಆಧಾರ-ಷೋಡಶೀ.

ದಿಂದಲ್ಲ. ಪರಂತು ಪರ-ಶಾಪಾದಿಗಳಿಂದ ತಾತ್ಕಾಲಿಕವೆಂದು ತಿಳಿಯಬೇಕು. ಈ ಪ್ರಕಾರ ತೃಣಾಂತ ತ್ರಿವಿಧ ಜೀವರು ಸ್ತ್ರೀ ಪುಂ ಭೇದದಿ ಇದ್ದಾರೆ. ಅವರ ಅಂತರ್ಗತ ಬಿಂಬಹರಿಯು ಸ್ತ್ರೀಯರಲ್ಲಿ ಸ್ತ್ರೀರೂಪನಾಗಿಯೂ, ಪುರುಷರಲ್ಲಿ ಪುರುಷರೂಪನಾಗಿಯೂ ಇರುವನು. ಈ ಉಭಯವಿಧ ರೂಪಗಳು ಅನಾದ್ಯನಂತ ಕಾಲಕ್ಕೂ ಅದೇ ರೀತಿಯಾಗಿ ಇರತಾರೆ. ಜೀವನನ್ನು ಬಿಟ್ಟು ಪರಮಾತ್ಮ ಇರೋಣ ವಿಲ್ಲ. ಪರಮಾತ್ಮನನ್ನು ಬಿಟ್ಟು ಜೀವ ಇರೋಣವಿಲ್ಲ. ಈ ಪ್ರಕಾರ 'ಪರ-ಅಪರ' ರೂಪಗಳಿಂದಲೂ ಸ್ತ್ರೀ ಪುಂ ಭೇದದಿಂದಲೂ, ಈ ಬ್ರಹ್ಮಾಂಡದಿ= ವಿದ್ಯಮಾನ ವಾದ ಪರ-ಅಪರ ತತ್ವಗಳಲ್ಲಿ ತದ್ಗತ ಜೀವರಲ್ಲಿ ವ್ಯಾಪ್ತನಾಗಿದ್ದಾನೆಂಬೋದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

ಪರಮಾತ್ಮಗೆ ಸ್ತ್ರೀ ಪುರುಷ ಎಂಬ ರೂಪ-ದ್ವಯವೆಂದು ಇಲ್ಲಿ ತಿಳಿಯಬಾರದು. ಅಪರಿಚ್ಛಿನ್ನವಾದ ರೂಪಗಳು, ವಿಲಕ್ಷಣ ರೂಪಗಳು, ಹರಿಯ ರೂಪಗಳು ಅವು ಅಧಿಷ್ಠಾನಗತ ರೂಪಗಳಲ್ಲಿ ಸ್ವಾಖ್ಯರೂಪಗಳು ಅಪರಿಚ್ಛಿನ್ನಗಳಾದ್ದರಿಂದ ಅವುಗಳನ್ನು ರಮಾದೇವೇರೂ ಕೂಡ ಸಾಕಲ್ಯೇನ ತಿಳಿಯಲಾರರು. ಸ್ತ್ರೀ-ಪುಂ ಭೇದ ವಿವಕ್ಷೆ ಜೀವ ಅಧಿಷ್ಠಾನಗಳು ಅಧಿಕಾರಿಗೆ ಅದರ ವಿವರ ತಿಳಿಯುವದ ಕ್ಕೋಸ್ಕರ ಹೇಳಲ್ಪಟ್ಟದ್ದೆಂದು ತಿಳಿಯಬೇಕು. ಯಾಕೆ ಹೇಳಿದ್ದಾರೆಂದರೆ ಸ್ತ್ರೀಯರು ಸ್ತ್ರೀರೂಪಪರಮಾತ್ಮನನ್ನ, ಪುರುಷರು ಪುರುಷರೂಪಭಗವಂತನನ್ನ ಉಪಾಸನೀ ಮಾಡಬೇಕೆಂದು ಮತ್ತು ಅವರವರಿಗೆ ಆಯಾ ರೂಪಗಳೇ ಅಪರೋಕ್ಷವಾಗತ ದೆಂದು ತಿಳಿಯಬೇಕೆಂದೂ ಉದ್ದೇಶ, ಪುರುಷರು ಪುರುಷರೂಪಿ ಪರಮಾತ್ಮ ನನ್ನ. ಸ್ತ್ರೀರೂಪಿ ಲಕ್ಷ್ಮೀದೇವೇರಿಂದ ಸಹಿತವಾಗಿ ಉಪಾಸನಾ ಮಾಡಬೇಕು, ಸ್ತ್ರೀಯರಿಗೆ ಸ್ತ್ರೀರೂಪಿ ಪರಮಾತ್ಮನನ್ನ ಉಪಾಸನಾ ಮಾಡುವ ಕಾಲಕ್ಕೆ ಅಲ್ಲಿ ಬೇರೆ ಪರಮಾತ್ಮನ ಪುರುಷರೂಪವಿಲ್ಲವೆಂದೂ ಮತ್ತು ಸ್ತ್ರೀರೂಪೀ ಪರಮಾತ್ಮನ ಬದಿಯಲ್ಲಿ ಲಕ್ಷ್ಮೀದೇವೇರು ಸ್ತ್ರೀರೂಪದಿಂದಲೇ ಇರುವರೆಂದೂ, ಹೀಗೆ ಎರಡೂ ಸ್ತ್ರೀರೂಪಗಳೆಂದು ಉಪಾಸನೆ ಮಾಡಬೇಕು, (ಇದರಿಂದ) ಪುರುಷರೂಪೋ-ಪಾದಿಯಲ್ಲಿ ಲಕ್ಷ್ಮೀಸಮೇತನಾದ ಹರಿಯನ್ನೇ ಉಪಾಸನೆ ಮಾಡಿದಂತಾಗತದೆ. ಹೀಗೆ ತಿಳಿದು ಅನುಷ್ಠಾನ ಮಾಡುವದು ದಾವದದೆ, ಅದೇ ಬದುಕಿದ್ದಕ್ಕೆ ಫಲ ವೆಂದು ತಾತ್ಪರ್ಯ.

(ಗು) ನಾರಾಯಣಗೆ ಪರ-ಅಪರತತ್ವಗಳೆಂದು ಎರಡು ರೂಪಗಳು, ಸಮಸ್ತ ದೇವತೆಗಳಲ್ಲಿ ವ್ಯಾಪ್ತನಾಗಿ ಅಪರತತ್ವನೆಂದು ಕರೆಸಿಕೊಳತಾನೆ, ಇನ್ನೊಂದು ರೂಪ ಪರಲೋಕ ವೈಕುಂಠಾಧಿಪತಿ ಪರತತ್ವ. ಭಗವಂತಗೆ ಈ ಪ್ರಕಾರ ಎರಡೂ ರೂಪ ಗಳು, ಇದೇ ರೀತಿ ಬ್ರಹ್ಮಾದಿ ಜೀವರೊಳಗೆ ಸ್ತ್ರೀ ಪುಂ ಭೇದದಿಂದ ಎರಡು

ರೂಪಗಳು. ಸ್ತ್ರೀಯೊಳಗೆ ಅಂತರ್ಗತನಾದ ಸ್ತ್ರೀರೂಪ ನಾರಾಯಣೀ ರೂಪದಿಂದ ಕರಿಸಿಕೊಂಬಂಥ ರೂಪ ಒಂದು. ಪುರುಷರಂತರ್ಗತ ಬ್ರಹ್ಮಾದಿದೇವತೆಗಳ ಅಂತರ್ಗತನಾಗಿ ಕ್ಷರಾಕ್ಷರಗಳಿಗೆ ಉತ್ತಮವಾದ ಪುರುಷರೂಪ ಒಂದು. ಈ ಪ್ರಕಾರ ಸ್ತ್ರೀಪುರುಷರೂಪ ಭೇದದಿಂದ ಎರಡುವಿಧ ರೂಪಾತ್ಮಕ ನಾರಾಯಣ ಬ್ರಹ್ಮಾಂಡ ಪಿಂಡಾಂಡದಲ್ಲಿ ಬಹಿರಂತರ್ಗತನಾಗಿ ತನ್ನಾಮ ತದ್ರೂಪ ತತ್ತದಾಕಾರನಾಗಿ ವ್ಯಾಪ್ತನಾಗಿದ್ದಾನೆಂದು ಸ್ವೋತ್ತಮರಾದ ಜ್ಞಾನಿಗಳ ಮುಖದಿಂದ ತಿಳಿದುಕೊಂಡು ಭಜಿಸುವದೇ ಫಲವಿದು ಬಾಳ್ದುದಕೆ,

ರೂಪದ್ವಯವು-ಎರಡು ರೂಪಗಳಿವೆ, ಪದ್ಮಜ–ಬ್ರಹ್ಮ, ಪದ್ಮಜಾಂಡವ-ಬ್ರಹ್ಮಾಂಡವನ್ನು.

(ಟಿ) ರೂಪದ್ವಯ–ಪರಮಾತ್ಮನಿಗೆ ಅನಂತ ಪುರುಷರೂಪಗಳಿರುವಂತೆಯೇ ಅನಂತ ಸ್ತ್ರೀರೂಪಗಳೂ ಇವೆ. ಪುರುಷರಲ್ಲಿ ಪುರುಷರೂಪದಿಂದ ಬಿಂಬನಾಗಿರುವಂತೆಯೇ ಸ್ತ್ರೀಯರಲ್ಲಿ ಸ್ತ್ರೀರೂಪದಿಂದಲೇ ಬಿಂಬನಾಗಿರತಾನೆ. ಹೀಗೆಯೇ ಗಾಯತ್ರಿಯಲ್ಲಿ ಸ್ತ್ರೀರೂಪದಿಂದಿರುವನೆಂದೂ ವಾಕ್ಕಿನಲ್ಲಿ ಸ್ತ್ರೀರೂಪಹಯಗ್ರೀವ ರೂಪದಿಂದಿದ್ದು ವಾಕ್ ನಾಮಕನಾಗಿದ್ದಾನೆಂದೂ ೧೫ನೇ ನುಡಿಯಲ್ಲಿ ಹೇಳಲಾಗಿದೆ, ಆದರೂ ಈ ರೂಪಗಳಿಗೆ ಪರಸ್ಪರ ಭೇದವಿಲ್ಲ. (೨) ಪರಾಪರತತ್ವಗಳು– ಪರ ಶಬ್ದವಾಚ್ಯಳಾದ ರಮಾದೇವಿ, ಅಪರವೆಂಬ ಬ್ರಹ್ಮಾದಿ ಜೀವರು. ಕಾರ್ಯ ಕಾರಣ ತತ್ವಗಳೂ (ಪರ-ಕಾರಣ. ಅಪರ-ಕಾರ್ಯ) ಈ ಶಬ್ದವಾಚ್ಯವಾಗುವುದೂ ಉಂಟು, ಪರಮಾತ್ಮ ಅವುಗಳಲ್ಲೆಲ್ಲಾ ಇದ್ದರೂ ಅವನ ರೂಪಗಳಿಗೆ ಮಾತ್ರ ಭೇದವಿಲ್ಲ ಎಂಬ ವಿಷಯ 'ಪರಾವರಾಣಾಂ ಪರಮ ಆಸ್ತೇ ಕೈವಲ್ಯಸಂಜ್ಞಿತಃ । ಕೇವಲಾನುಭವಾನಂದ–ಸಂದೋಹೋ ನಿರುಪಾಧಿಕಃ ॥' ಎಂಬ ಭಾಗವತವಾಕ್ಯದಿಂದ (೧೧–೧–೧೮) ಸಿದ್ಧವಾಗುತ್ತದೆ.

ಒಂದು ರೂಪದೊಳನಂತ ರೂಪಗಳು ।
ಪೊಂದಿಪ್ಪವು ಗುಣಗಣ ಸಹಿತ ॥
ಹಿಂದು ಮುಂದೆ ಎಂದೆಂದಿಗೂ (ಎಂದಿಗು) ಗೋ
(ಹಿಂದೆ ಇಂದು ಮುಂದೆಂದಿಗೂ)
ವಿಂದಗೆ ಸರಿಮಿಗಿಲಿಲ್ಲೆಂತೆಂಬುದೆ ॥೨೧॥

(ಈ ನುಡಿ ಇತರತ್ರಗಳಲ್ಲಿ ೧೫ ಎಂದೂ ೧೬ ಎಂದೂ ಇದೆ)

ಹಿಂದೆ ಹೇಳಿದ್ದರಲ್ಲಿ ಪ್ರತಿಬಿಂಬವಾದ ಜೀವ ಒಬ್ಬನು, ತದಂತರ್ಗತನಾದ ಪರಮಾತ್ಮ ಒಬ್ಬನೆಂತಲೂ ಆದೇ ಸ್ತ್ರೀ ಪುಂ ಭೇದದಿಂದ ಇದೆ ಎಂತಲೂ, ಸ್ವಾಪ್ಯ

ದಲ್ಲಿ ಅನೇಕವಾದ ವಿಲಕ್ಷಣ ರೂಪಗಳು ಅಪರಿಚ್ಛಿನ್ನಗಳಾಗಿ ಇವೆ ಎಂತಲೂ ಹೇಳೋಣದರಿಂದ ಪರಮಾತ್ಮನ ಒಂದೊಂದೇ ಬಿಂಬರೂಪಗಳು ಅನಂತ ಎಂಬು ದಾಗಿ ತೋರತದೆ, ಪರಮಾತ್ಮನ ಒಂದೊಂದಾದ ಅನಂತ ರೂಪಗಳು ಅಂಥವು ಗಳಲ್ಲಿ ಇನ್ನೂ ವಿಶೇಷವುಂಟೆಂದು ಹೇಳತಾರೆ. ಆ ವಿಶೇಷವೇನೆಂದರೆ, ಒಂದು **ರೂಪದೊಳು**=ಬಿಂಬರೂಪವಾದ ಒಂದು ರೂಪದೊಳಗೆ, **ಅನಂತರೂಪಗಳು ಪೊಂದಿಪ್ಪವು**=ಅನಂತಾನಂತ ಅಪರಿಚ್ಛಿನ್ನರೂಪಗಳು ಹೊಂದಿಕೊಂಡು ಇರೋಣ ವಾಗಿದೆ. ಹೇಗೆಂದರೆ :-ಕಸಕಸಿಯಿಂದ (ಗಸಗಸೆಯ ಕಾಳುಗಳಿಂದ) ಒಂದು ಪ್ರತೀಕ ನಿರ್ಮಾಣಮಾಡಿದರೆ ಪ್ರತೀಕ ಒಂದೇ, ಆದರಲ್ಲಿ ವಿದ್ಯಮಾನವಾದ ಕಸಕಸಿಗಳು* ಅನೇಕಗಳು ಹೇಗೋ ತದ್ಗತ ಅನೇಕರೂಪಗಳಿಂದ ಯುಕ್ತವಾದದೆಂದು ಒಂದುರೂಪ ವೆಂದು ತಿಳಿಯಬೇಕು. ಆ ರೂಪಗಳು ಅಪರಿಚ್ಛಿನ್ನಗಳು. ಒಂದು ರೂಪಗತ ಅನಂತರೂಪಗಳೊಳಗೆ ಒಂದು ರೂಪ ಎಂಥಾದ್ದೆಂದರೆ ಆ ಒಂದು ರೂಪ ಮತ್ತು ಪೂರ್ವೋಕ್ತ ಪ್ರಕಾರ ಅನಂತ ರೂಪಗಳಿಂದ ಯುಕ್ತವಾದದ್ದು. ಈ ಪ್ರಕಾರ ಆದ್ಯಂತವಿಲ್ಲದ ರೂಪಗಳು ಒಂದು ಬಿಂಬರೂಪದೊಳಗೆ ಇರೋವಾಗಿವೆ, ಈ ಅನಂತರೂಪಗಳು ಪರಸ್ಪರ ಅತ್ಯಂತ ಅಭೇದಗಳು, ಯಾವ ಕಾಲಕ್ಕೂ ವಿಲಕ್ಷಣ ವಾಗಿರವು. ಆದ್ದರಿಂದ ಬಿಂಬರೂಪವನ್ನು ಒಂದಾಗಿ ತಿಳಿಯಬಾರದು. ಅನಂತ ರೂಪಗಳೆಂತಲೇ ತಿಳಿಯಬೇಕು, ಬಿಂಬರೂಪದಲ್ಲಿ ಅನಂತರೂಪಗಳನ್ನು ಅಂಗೀ- ಕರಿಸಿದ ಮೇಲೆ ಪ್ರತಿಬಿಂಬವೂ ಬಿಂಬನಂತೆ ಇರಬೇಕಾಯಿತಲ್ಲಾ ಎಂದರೆ, ಬಿಂಬಗೆ ಶ್ರೀದೇವಿಯರು ವಕ್ಷಸ್ಥಳದಲ್ಲಿದ್ದಾರೆ, ಆದರೆ ಪ್ರತಿಬಿಂಬಗೆ ವಕ್ಷಸ್ಥಳದಲ್ಲಿಲ್ಲ, ತದ್ವತ್ ಬಿಂಬಗೆ ಅನಂತರೂಪಗಳಿದ್ದರೂ ಪ್ರತಿಬಿಂಬಗೆ ಇಲ್ಲ. ಲೋಕದಲ್ಲಿ ನಿಲ್ಲುವ ಆಭರಣ ಹಾಕಿಕೊಂಡು ದೇಹಾಕಾರದಂತೆ ಕವಚ ತೊಟ್ಟುಕೊಂಡರೆ ಆ ಕವಚಕ್ಕೆ ಸರ್ವಾಭರಣಗಳು ಇರತದೇ ಹ್ಯಾಂಗೆ, ತೊಟ್ಟುಕೊಂಡ ಸಾಕಾರ ಕವಚಕ್ಕೆ ಪುರುಷನೋ ಪಾದಿಯಲ್ಲಿ ಕೈ ಕಾಲುಗಳು ಇರುವವೇ ಹೊರತು ತದನ್ಯಗಳು ಇರೋಣಿಲ್ಲಾ ಹ್ಯಾಂಗೋ ಹಾಗೆಯೇ ಬಿಂಬಪ್ರತಿಬಿಂಬರು. ಬಿಂಬ ಪರಮಾತ್ಮ, ಪ್ರತಿಬಿಂಬ ಜೀವ ಎಂಬುವದರಲ್ಲಿ ಒಂದು ವಿಶೇಷವಿದೆ, ಏನೆಂದರೆ ಬಿಂಬನಂತೆ ಪ್ರತಿಬಿಂಬ ಎಂದು ತಿಳಿದರೆ ಮೇಲಿನಂತೆ ಶಂಕಾ ಬರುವುದು ಖರೇವೇ. ಈ ರೀತ್ಯಾ ಅಂಗೀಕರಿಸಿದರೆ ಪ್ರಮೇಯ ಪ್ರಮಾಣಗಳಿಗೆ ವಿರುದ್ಧವಾಗತದೆ, ಉಕ್ತಿ ಏನೋ ಬಿಂಬ ಪರಮಾತ್ಮ, ಪ್ರತಿಬಿಂಬ ಜೀವ ಎಂಬುದು ಬೇರೇನೆ. ಆದರೆ ಇಲ್ಲಿ ಬರತಕ್ಕ ಪರಸ್ಪರ ವಿರೋಧಕ್ಕೆ ಸಮನ್ವಯ ಹ್ಯಾಂಗೆಂದರೆ ಪ್ರತಿಬಿಂಬಾಂತರ್ಗತನಾದ ಬಿಂಬ ಪ್ರತಿಬಿಂಬ ಸದೃಶನಾಗಿ ವ್ಯಾಪ್ತನಾಗಿದ್ದಾನೆ. ಪ್ರತಿಬಿಂಬನಲ್ಲಿ ಇಲ್ಲದೇ ಇದ್ದದ್ದು ತನ್ನಲ್ಲಿದೆ, ಅದನ್ನು ವ್ಯಕ್ತ ಮಾಡಲಿಲ್ಲ. ಏಕದೇಶ ಸಾಮ್ಯ ಪ್ರತಿಬಿಂಬನೇ ಹೊರತು ಸರ್ವ ಸಾಮ್ಯನಲ್ಲ. ಪ್ರತಿ

* ಗಸಗಸೆಯ ಕಾಳುಗಳು.

ಬಿಂಬನಾದ ಜೀವ ದರ್ಪಣಗತ ಪ್ರತಿಬಿಂಬವತ್ ಪ್ರತಿಫಲಿಸಿದವನಲ್ಲ. ಆದ್ದರಿಂದ ಏಕದೇಶಸಾಮ್ಯನು. ಏಕದೇಶವಾದರೂ ಔಪಚಾರಿಕವು. ಈ ಪ್ರಕಾರ ಬಿಂಬರೂಪೀ ಹರಿಯು ಅನಂತರೂಪಗಳಿಂದಲೂ ಅದೇ ಪ್ರಕಾರ ಅನಂತ ಪ್ರಕಾರ ಕಲ್ಯಾಣಗುಣ ಗಣಗಳ ಸಮೂಹದಿಂದಲೂ ಜೀವಾಂತರ್ಗತನಾಗಿ ಹೊಂದಿಕೊಂಡಿರುವನೆಂದು ಉಪಾಸನೆ ಮಾಡಬೇಕು. ಹಿಂದೆಮುಂದೆ:-ಹಿಂದೆ= ಗತವಾದ ಅನಂತಾನಂತ ಬ್ರಹ್ಮಾಂಡಗಳಲ್ಲಾಗಲೀ ಮುಂದೆ ಬರತಕ್ಕ ಅನಂತಾನಂತ ಬ್ರಹ್ಮಾಂಡಗಳಲ್ಲಾಗಲೀ ವರ್ತಮಾನ ಬ್ರಹ್ಮಾಂಡದಲ್ಲಾಗಲೀ, ಎಂದೆಂದಿಗೂ=ಅನಾದ್ಯನಂತ ಕಾಲಕ್ಕೂ, ಗೋವಿಂದಗೆ=ವೇದಪ್ರತಿಪಾದ್ಯನಾದ ಬಿಂಬರೂಪಿ ಹರಿಗೆ-ಸರಿಮಿಗಿಲಿಲ್ಲ, ಸಮಾನಿಕರು ಇಲ್ಲ ಅಧಿಕರೂ ಇಲ್ಲ ಎಂತೆಂಬುದೇ-ಎಂದು ತಿಳಿಯುವುದೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ. ಲೋಕದೃಷ್ಟಾಂತದಲ್ಲಿ ಸಮಾನಿಕರು ಅಧಿಕರು ಇದ್ದಾರೆ, ಅದರಂತೆ ಪರಮಾತ್ಮನಿಗೆ ದಾರೂ ಸಮಾಧಿಕರೂ ಇಲ್ಲ. ರಮಾದೇವೇರು ಪರಮಾತ್ಮನ ಗುಣರೂಪಕ್ರಿಯೆಗಳ ಆದ್ಯಂತಗಳನ್ನು ಕಾಣದೇ ನೂತನ ನೂತನವಾಗಿ ಕಂಡದ್ದು ಹೇಗೆಂದರೆ ಒಂದು ರೂಪಗತ ರೋಮಾದಿ ನಖಾದಿಗಳು ಯಾವತ್ತು ಸಾಕಾರಗಳು ಪೂರ್ಣಗಳು, ಒಂದು ರೂಪಗತ ಅನಂತಾನಂತ ರೂಪಗಳೊಳಗೆ ಒಂದು ರೂಪವನ್ನು ಉಪಾಸನಾ ಮಾಡತಾ ಅದರೊಳಗೆ ಅನಂತಾನಂತ ರೂಪಗಳನ್ನು ಕಂಡಳು. ಆದರೆ ಅವುಗಳ ಆದ್ಯಂತಗಳನ್ನು ಕಾಣದೇ ಹೋದಳು ಮತ್ತು ಅದರಲ್ಲಿ ಇನ್ನೊಂದು ರೂಪ ಉಪಾಸನಾ ಮಾಡಹೊರಟಳು, ಅವುಗಳಲ್ಲಿಯೂ ಆದ್ಯಂತಗಳನ್ನ ಕಾಣದೇ ಹೋದಳು, ಇನ್ನೂ ಒಂದು ರೂಪಗತ ನಖಾವರಣ ಉಪಾಸನಕ್ಕೆ ಹೊರಟಳು, ಅದರಲ್ಲಿಯೂ ಉಪಾಸನಾ ಮಾಡತಾ ಹೋದರೂ ಆದ್ಯಂತ ಸಿಗಲಿಲ್ಲ, ತದ್ವತ್ ಗುಣಗಳು, ತದ್ವತ್ ಕ್ರಿಯೆಗಳು. ಇವುಗಳಲ್ಲಿ ಯಾವುದರ ಆದ್ಯಂತಗಳನ್ನ ಅರಿಯದಾದಳು. ಉಪಾಸನೆ ಮಾಡಿದಷ್ಟೂ ನೂತನ ನೂತನಗಳಾದ ರೂಪಗುಣ ಕ್ರಿಯಾದಿಗಳನ್ನು ಕಂಡು ಅವುಗಳ ಅಂತಗಾಣದೇ ಆನಂದಮಗ್ನಳಾದಳು. ಎಲ್ಲವೂ ಅಭೇದಗಳು, ಸಾಕಾರಗಳು. ಇದೇ ರೀತಿಯಾಗಿ ಬಿಂಬನು ಸರ್ವಜೀವರಲ್ಲಿ ಅನಾದಿ ಕಾಲದಿಂದ ಇದೇ ರೀತ್ಯಾ ಇರತಾನೆ. ಅವನ ಅಪರಿಚ್ಛಿನ್ನ ವ್ಯಾಪ್ತಿಯಲ್ಲಿ ಕೂಡಾ ಇದೇ ರೀತ್ಯಾ ತಿಳಿಯಬೇಕು. ಇಂಥಾ ಮಹಿಮೋಪೇತ ಹರಿ ಜೀವಗೆ ಬಿಂಬನಾಗಿದ್ದಾನೆಂತ ಹೇಳೋಣವರಿಂದ ಅಸದೃಶವಾದ ರೂಪಗುಣಕ್ರಿಯಾದಿಗಳು ಶ್ರೀವತ್ಸಾದಿ ಆಭರಣಗಳುಳ್ಳವನಾದ ಕಾಲಕ್ಕೂ ಜೀವಗೆ ಬಿಂಬನಾದ್ದರಿಂದ ಜೀವನ ಯೋಗ್ಯತಾನುಸಾರ ಜೀವನಧರ್ಮಗಳನ್ನು ಆಶ್ರಯಿಸಿ ಜೀವಾಕಾರಧರಿಸಿ ಜೀವನಲ್ಲಿದ್ದು ತನ್ನಲ್ಲಿರತಕ್ಕದ್ದನ್ನು ಜೀವನಲ್ಲಿ ವ್ಯಕ್ತಮಾಡದೇ ತನ್ನಲ್ಲಿಟ್ಟುಕೊಂಡಿದ್ದಾನೆ. ಆದ್ದರಿಂದ ಜೀವಗೆ ಬಿಂಬ ಪರಮಾತ್ಮ ಎಂತಲೇ ಉಚ್ಚರಿಸತಿರಬೇಕು. ಆ ರೀತ್ಯಾ ಜೀವ ಪ್ರತಿಬಿಂಬ ಎಂತ ಕರೆಸತಾನೆ, ಹೀಗೆ ಅಂದರೆ ಇಬ್ಬರಿಗೂ ಸಾಮ್ಯ ಬರೋದಾಗತದೆಂದರೆ ಪರಮಾತ್ಮನ ಸಾಮ್ಯ ಜೀವಗೆ ಬರೋದಿಲ್ಲ, ಪರಮಾತ್ಮಗಾದರೋ ಜೀವ

ಸಾಮ್ಯ ಬಂದರೆ ದೋಷವಲ್ಲ, ರಮಾತ್ಮಗೆ ಸರ್ವಶಕ್ತಿಯೂ ಸರ್ವ ಯೋಗ್ಯತೆಯೂ ಇರೋಣದರಿಂದ ಜೀವ ಸಾಮ್ಯನೂ ಹೌದು ತದನ್ಯ ಅಪರಿಚ್ಛಿನ್ನವಾದ ಅತಿಶಯನೂ ಅಹುದು, ಜೀವಗೆ ಅಂಥ ಯೋಗ್ಯತೆ ಇಲ್ಲದ್ದರಿಂದ ಪರಮಾತ್ಮಗೆ ಪ್ರತಿಬಿಂಬನೆಂದು ಉಚ್ಚಾರ ಕೂಡದು. ಪ್ರತಿಬಿಂಬವೂ ಖರೇ, ಜೀವಾಕಾರನಾದಿ ಜೀವಾಂತರ್ಗತನಾಗಿ ಇರೋಣದರಿಂದ ತದ್ವಿವಕ್ಷಯಾ ಪ್ರತಿಬಿಂಬ ಎಂತ ಜೀವ ಕರೆಸಲ್ಪಡತಾನೆ. ಈ ರೀತ್ಯಾ ಜೀವ ಪ್ರತಿಬಿಂಬನೆಂದು ತಿಳಿಯಬೇಕು, ಅನ್ಯಥಾ ತಿಳಿಯಬಾರದು. ಈ ಪ್ರಕಾರ ತಿಳಿಯೋಣವೇ ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ.

(ಗು) ನಾರಾಯಣನ ಒಂದು ರೂಪದೊಳಗೆ ಅನಂತರೂಪಗಳು ಆಚ್ಛಾದನ ವಾಗಿರುವುವು. ಒಂದೊಂದರಲ್ಲೂ ಅನಂತಾನಂತ ಗುಣಸಮೂಹಗಳು. ಆ ರೂಪಗಳ ಎಣಿಸಲಿಕ್ಕೆ ಬ್ರಹ್ಮಾದಿಗಳಿಗೇ ಅಸಾಧ್ಯ. ಈ ರೂಪಗಳಿಗೆ ದೃಷ್ಟಾಂತ ವಟವೃಕ್ಷ ಬೀಜ ಗಳು. ಒಂದು ಬೀಜದಿಂದ ವೃಕ್ಷ ಉತ್ಪತ್ತಿ, ಆ ವೃಕ್ಷದಿಂದ ಅನಂತ ಬೀಜಗಳು. ಅನಂತ ಬೀಜಗಳಿಂದ ಅನಂತಾನಂತ ವೃಕ್ಷಗಳಭಿವ್ಯಕ್ತಿ. ಈ ಪ್ರಕಾರ ಒಂದು ಬೀಜ ದಲ್ಲಿ ವೃಕ್ಷಗುಣಗಣಗಳು ಯುಕ್ತವಾಗಿ ಹ್ಯಾಂಗಿರತವೋ ಆ ಪ್ರಕಾರ ಜ್ಞಾನದಿಂದ ಲಕ್ಷ್ಮೀಕಾಂತನ ರೂಪಗಳ ಗುಣಗಳ ಅನ್ವಯಿಸಬೇಕು. ಹಿಂದೆ ಹೋದ ಕಲ್ಪಗಳಲ್ಲಾ ಗಲಿ, ಈಗ ನಡೆಯೋಕಲ್ಪದಲ್ಲಿ ಮುಂದೇನಾಹೋ ಕಲ್ಪಗಳಲ್ಲಿ ಶ್ರೀಗೋವಿಂದಗೆ ಸಮವಾದವರು ಇಲ್ಲ. ರಮಾಬ್ರಹ್ಮಾದಿಗಳು ಸಹ ತದ್ದಾಸರು, ಶ್ರೀಹರಿಗೆ ಸಮರು ಯಾರೂ ಇಲ್ಲ. ಅಧಿಕರಂತೂ ಎಂದೆಂದಿಗೂ ಇಲ್ಲ. ಹೀಗೆ ತಿಳಿಯುವದೆ ಫಲವಿದು ಬಾಳ್ದುದಕೆ.

(ಘೀ) ಒಂದು ರೂಪದೊಳನಂತರೂಪಗಳು ಎಂಬ ಪ್ರಮೇಯವು ಕೆಳಗಿನ ಸನ್ನ್ಯಾಯರತ್ನಮಾಲಾ ಶ್ಲೋಕಗಳಲ್ಲಿ ವಿವರಿಸಲ್ಪಟ್ಟಿದೆ;—

ಜ್ಞಾನಾನಂದಾದ್ಯಸಂಖ್ಯೇಯ—ಗುಣಸಾಂದ್ರಾಕೃತೀನಿ ಚ ।
ಪರಸ್ಪರಮಭಿನ್ನಾನಿ ಸ್ವತಂತ್ರಾಣಿ ಸಮಾನಿ ಚ ॥
ಪೃಥಕ್ ಪೃಥಗನಂತಾನಿ ಪೃಥಕ್ ಪೂರ್ಣತಮಾನಿ ಚ ।
ರಮಾದ್ಯೈರಪ್ಯಚಿಂತ್ಯಾನಿ ಸಂತಿ ವಿಷ್ಣೋ ಜಗತ್ಪ್ರಭೌ ॥...
ರಾಮಕೃಷ್ಣವ್ಯಾಸಹಂಸ—ಕಪಿಲಾದ್ಯಾಃ ಪೃಥಕ್ ಪೃಥಕ್ ।..
ಸಂಪೂರ್ಣಾಸ್ತೇ ಪುನಶ್ಚೈವಂ ಪುನಶ್ಚೈವಂ ಪುನಃಪುನಃ ॥ ..
ಪರಸ್ಪರಮಭಿನ್ನಾಶ್ಚ ಧರ್ಮಾಃ ಸರ್ವೇಽಪಿ ತದ್ಗತಾಃ ।
ತದಭಿನ್ನಾ ಗುಣಾ ನಿತ್ಯ—ಮಪಿ ಸರ್ವೇ ವಿಶತಃ ॥

ಜಗನ್ನಾಥದಾಸರೇ ತತ್ತ್ವಸುವ್ವಾಲಿಯ ಒಂದು ಪದ್ಯದಲ್ಲಿ 'ಎಲ್ಲಿ ಹರಿರೂಪ ಮತ್ತಲ್ಲಿ ಗುಣಕ್ರಿಯೆಗಳು । ಅಲ್ಲಿ ಗುಣರೂಪ ಕ್ರಿಯೆಗಳು ॥ ಕ್ರಿಯೆಗಳು ಗುಣ ಬಲ್ಲವನೇ ಜ್ಞಾನಿ ಜಗದೊಳು ' ಎಂದಿದ್ದಾರೆ.

**ಕಾರಣ ಕಾರ್ಯಾಂತರ್ಗತ ಅಂಶವ ।**
**ತಾರಾವೇಶಾಹಿತ(ವಿಹಿತ) ಸಹಜ ॥**
**ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರ ವಿ ।**
**ಕಾರವಿಲ್ಲದಲೆ ತೋರುವನೆಂಬುದೆ ॥೨೨॥**

(ಈ ನುಡಿ ಕೆಲವೆಡೆ ೨೪ ಎಂದೂ ೨೫ ಎಂದೂ ಇದೆ)

ಕಾರಣ=ಸೃಷ್ಟಿಗೆ ಕಾರಣವಾದ ಅನಾದಿಭೂತವಾದ ನಾಶರಹಿತವಾದ ಮೂಲ ಜಡ ಪ್ರಕೃತಿಯಲ್ಲಿಯೇ, ಕಾರ್ಯ=ಮೂಲ ಜಡಪ್ರಕೃತಿ ಕಾರ್ಯಗಳಾದ ಸಪ್ತಾವರಣದಸಹಿತವಾದ ಬ್ರಹ್ಮಾಂಡವೇನು, ತದ್ಗತ ಪಂಚಭೂತಗಳೇನು, ಪ್ರಾಣಿಗಳ ಸ್ವರೂಪದೇಹಕ್ಕೆ ಅನ್ಯಗಳಾದ ಜಡಪ್ರಕೃತ್ಯಾತ್ಮಕ ಸ್ಥೂಲಾದಿ ಶರೀರಗಳೇನು, ಇದು ಯಾವತ್ತೂ ಕಾರಣಭೂತವಾದ ಪೂರ್ವೋಕ್ತ ಜಡಪ್ರಕೃತಿ ಕಾರ್ಯಗಳು. ಮಹಾ ಪ್ರಳಯಕ್ಕೆ ಸಮಸ್ತವಾಗಿ ನಾಶವಾಗತಕ್ಕದ್ದು. ಅಂತರ್ಗತ=ಈ ಕಾರಣ ಕಾರ್ಯಾಂತರ್ಗತನಾಗಿ ಆದರದರ ನಾಮಗಳಿಂದ ಕರೆಸತಾ ಇದ್ದಾನೆ. ಅಂಶ ಅವತಾರ=ಅಂಶ ಎಂದರೂ, ಅವತಾರ ಎಂದರೂ ಎರಡೂ ಏಕಾರ್ಥವೇ, ಪುನರುಕ್ತಿಗೆ ಪ್ರಯೋಜನವೇನೆಂದರೆ, 'ಕಾರಣ' ಅನಾದಿನಿತ್ಯವಾದ್ದರಿಂದಅ ಕಾರಣಕ್ಕೆ ಬಿಂಬನಾಗಿ ಅನಾದಿಯಿಂದ ಕಾರಣಾಂತರ್ಗತನಾಗಿರತಾನೆ. ಜೀವರಿಗೆ ಬಿಂಬ-ನೋಪಾದಿಯಲ್ಲಿ 'ಕಾರಣ'ಕ್ಕೂ ಬಿಂಬನಾಗಿದ್ದಾನೆ. 'ಅಂಶ' ಮೂಲರೂಪದಿಂದ ಅಭಿವ್ಯಕ್ತವಾದ ಅನಂತರೂಪಗಳು. ಅವತಾರ=ಮೂಲರೂಪದಿಂದ ಅಭಿವ್ಯಕ್ತವಾದ ರೂಪಗಳೇ, ಪುನರುಕ್ತಿಗೆ ಕೃತ್ಯವೇ ಎಂದರೆ ಮೂಲಜಡ ಪ್ರಕೃತಿಗತ 'ಕಾರಣ' ವಾಚ್ಯನಾದ ಬಿಂಬ ಮೂಲಜಡಪ್ರಕೃತಿಯನ್ನು ರಕ್ಷಿಸತಕ್ಕವನು. ತದ್ಗತ ಪರಮಾತ್ಮ ವಿಯೋಗನಾದನೆಂದರೆ, ಆ ಪ್ರಕೃತಿಗೆ ನಾಶ ಪ್ರಾಪ್ತವಾಗತದೆ. ನಿತ್ಯತ್ವ ಹೋಗತದೆ. ಹ್ಯಾಂಗೆಂದರೆ ದೇಹಗತನಾದ ಪರಮಾತ್ಮ ದೇಹದಲ್ಲಿರುವವರೆಗೂ ದೇಹಕ್ಕೆ ನಾಶ ವಿಲ್ಲ. ವಿಯೋಗವಾದರೆ ದೇಹಕ್ಕೆ ನಾಶಪ್ರಾಪ್ತವಾಗತದೆ. ಇಂಥ ನಾಶ ಪ್ರಾಪ್ತವಾಗದಂತೆ ಕಾರಣರೂಪನಾದ ಮೂಲ ಜಡಪ್ರಕೃತಿಗೆ ಬಿಂಬನಾಗಿ ಅ-ವಿಯೋಗನಾಗಿದ್ದಾನೆ. ಈ ರೂಪದ ಕಾರ್ಯ ಕಾರಣ ಪ್ರಕೃತಿಗೆ ನಾಶ ಬಾರದಂತೆ ರಕ್ಷಣೆ ಮಾತ್ರ ಮಾಡತಕ್ಕ ಕಾರ್ಯ ಮಾತ್ರವೇ. ಈ ಕಾರಣರೂಪವಾದ ಜಡಪ್ರಕೃತಿ ಕಾರ್ಯರೂಪದಿಂದ ಜಗದಾತ್ಮನಾಗಿ ಪರಿಣಮಿಸಬೇಕಾದರೆ ಮತ್ತೊಂದು ರೂಪ

ದಿಂದ ಆಗಬೇಕು. ರಾವಣನ ಸಂಹಾರಕ್ಕೆ ರಾಮ ಹ್ಯಾಂಗೋ, ಕಂಸನ ಸಂಹಾರಕ್ಕೆ ಕೃಷ್ಣ ಹ್ಯಾಂಗೋ ತದ್ವತ್ ಆಯಾ ಕಾರ್ಯಗಳಿಗೆ ಭಗವದ್ರೂಪಗಳು ಬೇರೆ ಬೇರೆ ಎಂಬುದು ಹೇಗೆ ನಿಯಮವೋ ತದ್ವತ್ 'ಕಾರಣ' ಪ್ರಕೃತಿಯನ್ನು ರಕ್ಷಣೆಮಾಡತಕ್ಕ ರೂಪ ಬೇರೆಯದು. ಅದನ್ನು ಕಾರ್ಯಾತ್ಮನಾ ಪರಿಣಾಮ ಮಾಡತಕ್ಕ ರೂಪ ಬೇರೆ, ಇದೇ ನಿಯಮ. ಆದ್ದರಿಂದ ಅಂಶ-ಅಂಶಿ = ವಟಪತ್ರಶಾಯಿಯಾದ ನಾರಾಯಣ ರೂಪದಿಂದ ಅಂಶಗಳು ಹೊರಟು ಕಾರಣರೂಪವಾದ ಮೂಲಜಡ ಪ್ರಕೃತಿಯಲ್ಲಿ ಪ್ರವೇಶಮಾಡಿ, ಆ ಪ್ರಕೃತಿಯನ್ನು ಜಗದಾತ್ಮನಾ ಕಾರ್ಯರೂಪದಿಂದ ಪರಿಣಾಮ ಮಾಡುವದಾಗತದೆ. ಅವೇ ರೂಪಗಳೇ ಮತ್ತೂ ಅನೇಕ ರೂಪಗಳಿಂದ, ಅಂಶಗಳಿಂದ, ಕಾರ್ಯದಲ್ಲಿ ಪ್ರವೇಶಮಾಡಿ (ಆ ಪ್ರಕೃತಿಯನ್ನ) ಪ್ರಳಯಕಾಲದವರೆಗೂ ಸಂರಕ್ಷಣೆ ಮಾಡಿ ಪ್ರಳಯದಲ್ಲಿ ವಿಯೋಗವಾಗೋಣದರಿಂದ ಆ ಕಾರ್ಯಗಳು ನಾಶವಾಗಿ ಕಾರಣಾತ್ಮನಾ ತನ್ನ ಮೂಲಕಾರಣದಲ್ಲಿ ಸೇರತದ ಹೀಗೆ ವಿಯೋಗವಾದ ಭಗವದ್ರೂಪಗಳು ತನ್ನ ಮೂಲರೂಪದಲ್ಲಿ ಸೇರೋಣವಾಗತವೆ. ಆದ್ದರಿಂದ...ಅಂಶ ಶಬ್ದಕ್ಕೆ ಇದು ಕೃತ್ಯವು. ಅವತಾರವೂ ಮೂಲರೂಪದಿಂದ ಹೊರಟದ್ದೆ. ಇದು ದಾವುದು ? ಇದಕ್ಕೆ ಕೃತ್ಯವೇನೆಂದರೆ ರಾಮಕೃಷ್ಣಾದಿ ರೂಪಗಳು ಅವತಾರರೂಪಗಳು, ದುಷ್ಟನಿಗ್ರಹ ಮಾಡಿ ಶಿಷ್ಟಪರಿಪಾಲನೆ ಮಾಡಿ ಆ ಕಾರ್ಯಗಳು ಆಗೋಣವೇ ಆ ರೂಪಗಳು, ಮೂಲರೂಪ ಸೇರೋಣವಾಗತದೆ. ಆದ್ದರಿಂದ ಅಂಶ, ಅವತಾರ ಎಂಬ ಪುನರುಕ್ತಿಗೆ ಕೃತ್ಯ (ಸಾರ್ಥಕ್ಯ) ಎಂದಂತಾಯಿತು, ಆವೇಶ ಆಹಿತ ಸಹಜ--ಆಹಿತ = ಲೋಹಾದಿ ನಿರ್ಮಿತ ಪ್ರತೀಕಗಳು, 'ಸಹಜ' = ಶಾಲಗ್ರಾಮಾದಿಗಳು, ಆವೇಶ = ಶುಕ್ಲಕೇಶ, ಕೃಷ್ಣಕೇಶ ಅಂಶದಿಂದ ಹೊರಟು ದೇಹದಲ್ಲಿ ಪ್ರವಿಷ್ಟವಾಗೋಣ ದಾವದದ ಇದೇ ಆವೇಶ. ಪ್ರತಿಮಾಂತರ್ಗತ ರೂಪಕ್ಕೆ ಆಹಿತ ಅಂತ ಹೆಸರು. ಶಾಲಗ್ರಾಮಾದಿ ರೂಪಕ್ಕೆ ಸಹಜ ಎಂತ ಹೆಸರು. ಆವೇಶರೂಪಕ್ಕೆ ಆವೇಶವೆಂದು ಹೆಸರು. ಪ್ರೇರಣ = ಸರ್ವಜೀವಾಂತರ್ಗತನಾಗಿ ಪ್ರೇರಕನಾಮದಿಂದಿದ್ದು, ಪ್ರೇಕ್ಷಿತನಾದ ಕಡಿಯಿಂದ ಪ್ರೇರಣ ಎಂತ ಹೆಸರು. ಪ್ರೇರ್ಯ = ಸ್ಥೂಲದೇಹದಲ್ಲಿ ತತ್ವದೇವತೆಗಳಂತರ್ಗತನಾಗಿದ್ದು ಜೀವನ ದ್ವಾರಾ ಆಯಾ ಇಂದ್ರಿಯಕಾರ್ಯಗಳನ್ನು ಮಾಡಿಸೋ ನಿಮಿತ್ತ ಇಂದ್ರಿಯಾಭಿಮಾನಿ ದೇವತೆಗಳಿಗೆ ಪ್ರೇಕ್ಷಿತನಾದಕಡಿಯಿಂದ 'ಪ್ರೇರ್ಯ' ಎಂತ ಕರೆಸಲ್ಪಡತಾನೆ. ಆಹ್ವಯ = ಕಾರಣಾದಿ ಆಯಾ ಹೆಸರುಗಳಿಂದ ಕರೆಸತ ತದನ್ಯವಾದ ಸರ್ವತ್ರ, ಅಂದರೆ ಸರ್ವಪದಾರ್ಥಗಳಲ್ಲಿ ತದಾಕಾರನಾಗಿ ವ್ಯಾಪಿಸಿ ತನ್ನಾಮದಿಂದ ಕರೆಸತ, ವಿಕಾರವಿಲ್ಲದೆ = ಆಯಾ ಅಧಿಷ್ಠಾನಗಳಿಗೆ ವಿಕಾರ ಪ್ರಾಪ್ತವಾದರೂ ತದಂತರ್ಗತನಾದ ಹರಿಯು ವಿಕಾರಶೂನ್ಯನಾಗಿದ್ದು, ತೋರುವನೆಂಬುವದೆ = ವ್ಯಾಪ್ತದರ್ಶಿಗಳಿಗೆ* ತನ್ನ ವಿಕಾರಶೂನ್ಯವಾದ ರೂಪಗಳನ್ನು ತೋರತಾನೆಂಬುವದೇ

* ಪ್ರಹ್ಲಾದರಾಯರೇ ಮುಂತಾದ ವ್ಯಾಪ್ತೋಪಾಸಕರಿಗೆ ಎಂದರ್ಥ.

ಬದುಕಿದ್ದಕ್ಕೆ ಫಲ. ಚರಾಚರ ಸರ್ವತ್ರದಲಿ ತದಾಕಾರ ತಚ್ಛಬ್ದ ವಾಚ್ಯನಾಗಿ ವಿಕಾರ ಶೂನ್ಯನಾಗಿದ್ದಾನೆಂದು ಅನುಸಂಧಾನ ಮಾಡಬೇಕೆಂಬುದು ಇಲ್ಲಿಯ ತಾತ್ಪರ್ಯ. ಇದರಿಂದ ಜೀವ ಪೂರ್ಣನಲ್ಲ. ಪರಮಾತ್ಮ ಪೂರ್ಣ ಎಂತಲೂ, ಜೀವ ಅಸ್ವತಂತ್ರ, ಪರಮಾತ್ಮ (ನೊಬ್ಬನೇ) ಸ್ವತಂತ್ರ ಎಂತಲೂ, ಜೀವ ಉಪಾಧಿವಶಾತ್ ವಿಕಾರ ಐದ ತಕ್ಕವ, ಪರಮಾತ್ಮ ಉಪಾಧಿವಶಾತ್ ವಿಕಾರ ಹೊಂದದವನೆಂತಲೂ ಇತ್ಯಾದಿ ಜ್ಞಾನಪ್ರಾಪ್ತಿಯೇ ಬದುಕಿದ್ದಕ್ಕೆ ಫಲ.

(ಗು) ಕಾರಣಗಳಲ್ಲಿ, ಕಾರ್ಯಗಳಲ್ಲಿ ಅಂತರ್ಗತನಾಗಿ ಶ್ರೀರಮಾವಲ್ಲಭ ವ್ಯಾಪ್ತನಾಗಿಪ್ಪ. ಸ್ವರೂಪ ಅಂಶಗಳಲ್ಲಿ ಅವತಾರಗಳಲ್ಲಿ ಆವೇಶಗಳಲ್ಲಿ (ಹಿತ) ಕಾರ್ಯಗಳೊಳಗೆ (ಅಹಿತ) ಪ್ರತಿಮಾದಿಗಳಲ್ಲಿ (ಸಹಜ) ನಿರ್ವ್ಯಾಜದಿಂದ ಯಥಾರ್ಥವಾಗಿ ಶಾಲಗ್ರಾಮಾದಿಗಳಲ್ಲಿ ತದ್ರೂಪಗಳಿಂದ ಪ್ರೇರಿತನಾಗಿ (ಪ್ರೇರ್ಯ) ಉತ್ಸಾಹದಿಂದ ತಿಳಿಸಿಕೊಡುವಂಥವನಾಗಿ ಆಯಾ ನಾಮಗಳಿಂದ ಸರ್ವತ್ರ ಬಹಿರಂತರವ್ಯಾಪ್ತನಾಗಿ ವಿಕಾರವಿಲ್ಲದಲೆ ಸತ್ವರಜಸ್ತಮೋಗುಣ ವಿಕಾರರಹಿತನಾಗಿ ಬ್ರಹ್ಮಾಂಡದಲ್ಲಿ ಜೀವಜಡಗಳಲ್ಲಿ ಪ್ರಕಾಶಮಾನವಾಗಿ ಕಾಣಿಸಿಕೊಳ್ಳುಥಾನೆಂಬುದೇ ಫಲವಿದು ಬಾಳ್ವುದಕೆ.

(ಭೀ) ಕಾರಣಕಾರ್ಯಾಂತರ್ಗತನು ಎಂಬಲ್ಲಿ–'ಕಾರ್ಯ-ಕಾರಣವಸ್ತ್ವೈಕ್ಯ ದರ್ಶನಂ ಪಟತಂತುವತ್ । ಅವಸ್ತುತ್ವಾದ್ವಿಕಲ್ಪಸ್ಯ ಭಾವಾದ್ವೈತಂ ತದುಚ್ಯತೇ॥' ಎಂದು ಭಾಗವತದಲ್ಲಿ (೭-೧೫-೬೩) ಹೇಳಿದಂತೆ ವಸ್ತ್ರಕ್ಕೂ ಅದರ ನೂಲಿನ ಎಳೆಗಳಿಗೂ ಇರುವ ಅಭೇದದ ಏಕತ್ವದಂತೆ ಜಗದುತ್ಪತ್ತ್ಯಾದಿ ಕಾರ್ಯಗಳಿಗೆ ಕಾರಣವಾಗುವ ಪ್ರಕೃತಿಯು ತ್ರಿಗುಣಾದಿಗಳಲ್ಲಿಯೂ ತಜ್ಜನ್ಯಜಗದ್ವಸ್ತುಗಳಲ್ಲಿಯೂ ಇರುವ ಹರಿಯು ಒಂದು—ಎಂದು ತಿಳಿಯುವ ಪ್ರಮೇಯಕ್ಕೆ ಭಾವಾದ್ವೈತವೆಂದು ಹೆಸರು. (೨) ಅಂಶಗಳು ಸಾಕ್ಷಾದಂಶಗಳೆಂದೂ (ವಾಸುದೇವ ಸಂಕರ್ಷಣಾದಿಗಳು), ಭಿನ್ನಾಂಶಗಳೆಂದೂ (ಬ್ರಹ್ಮಾದಿಗಳು) ಎರಡು ಪ್ರಕಾರ. ರಾಮ, ಕೃಷ್ಣ, ವ್ಯಾಸಾದಿಗಳು ಅವತಾರಗಳು. ಆವೇಶ-ಪರನಲ್ಲಿ, ಬಲರಾಮನಲ್ಲಿ ಶುಕ್ಲಕೇಶಾವೇಶ, ವಿಹಿತ-ಭರತ-ಲಕ್ಷ್ಮಣಾದಿಗಳಲ್ಲಿರುವ ಪ್ರದ್ಯುಮ್ನ-ಸಂಕರ್ಷಣಾದಿಗಳಂತೆ ದೇವತೆಗಳಲ್ಲಿರುವ ವಿಶೇಷರೂಪಗಳು. ಸಹಜ-ಶಾಲಗ್ರಾಮಾದಿಗಳಲ್ಲಿರುವ ಸ್ವಯಂವ್ಯಕ್ತರೂಪ, ಜೀವರ ಮನ ಆದಿ ಇಂದ್ರಿಯಗಳಲ್ಲಿದ್ದು ಕಾರ್ಯ ನಡೆಸುವ ರೂಪವೇ ಪ್ರೇರಣರೂಪ, ಅನ್ಯರ ಪ್ರೇರಣೆಯಿಂದ ಕಾರ್ಯ ನಡೆಸುವುದು ಪ್ರೇರ್ಯರೂಪ, ಆಹ್ವಯ-ಇಂಥಾ ಹೆಸರುಗಳುಳ್ಳವನಾಗಿ ವಿವಿಧ ಮಹಿಮೆಗಳುಳ್ಳವನಾಗಿದ್ದಾನೆಂಬ ನಿಶ್ಚಯಜ್ಞಾನವನ್ನು ದೊರಕಿಸಿಕೊಳ್ಳುವುದೂ ಬಾಳಿನ ಫಲವು.

ಕ್ಲೇಶಾನಂದಗಳೀಶಾಧೀನ ಸ ।
ಮಾಸಮ ಬ್ರಹ್ಮಸದಾಶಿವರೂ ॥

ಈಶಿತವ್ಯರು (ನಿರಾಶಿಷರಲ್ಲದೆ) ಪರೇಶನಲ್ಲದಲೇ ।
ಶ್ವಾಸ ಬಿಡೋ (ಬಿಡುವ) ಶಕ್ತಿ ಲೇಸಿಲ್ಲೆಂಬುದೆ ||೨೩||

(ಈ ನುಡಿ ಇತರತ್ರ ೧೩ನೆಂಯುದೆಂದಿದೆ)

ಕ್ಲೇಶಾನಂದಗಳು = ಪ್ರಾಣಿಗಳಿಗೆ ಪ್ರಾಪ್ತವಾಗತಕ್ಕ ಕ್ಲೇಶವೇನು ಆನಂದ ವೇನು (ಎಲ್ಲವೂ), ಈಶಾಧೀನ = ಈಶಾಧೀನವು, ಸಮಾ = ದೇಶಕಾಲಗಳಿಂದ ಸಮಳಾದ ಲಕ್ಷ್ಮೀ ಎಂತ, ಅಸಮಾ = ದೇಶಕಾಲಗಳಲ್ಲಿ ಸಮರಲ್ಲರಾದವರು ಬ್ರಹ್ಮ = ಬ್ರಹ್ಮದೇವರು, ಸದಾಶಿವರೂ = ರುದ್ರದೇವರು ಇತ್ಯಾದಿ ದೇವತೆಗಳು, ಎಂಥವ ರೆಂದರೆ, ಈಶಿತವ್ಯರು— ಈಶ = ಸ್ವ, ಅವರವರಿಗೆ* ಸ್ವೋತ್ತಮರಾದವರು ಈಶ ಎಂತ ಕರಸಕಾರೆ. ಆದರೆ ತಾರತಮ್ಯಾನುಸಾರ ಸರ್ವರಿಗೂ ಪರಮಾತ್ಮ ಈಶ. ತವ್ಯರು = ಸರ್ವರೂ ಈ ಪರಮಾತ್ಮನ ಅಧೀನರು, ಪರಮಾತ್ಮ ಯಾವ ಅನ್ಯರ ಅಧೀನನಲ್ಲ, ಇಂಥಾ, ಪರೇಶನಲ್ಲಧಲೆ = ಸರ್ವೋತ್ತಮನಾದ ಪರಮಾತ್ಮನ ವ್ಯತಿರಿಕ್ತ ರಮಾದಿ ತೃಣಾಂತ ತ್ರಿವಿಧ ಜೀವರು ಶ್ವಾಸಬಿಡೋ ಶಕ್ತಿ ಲೇಸಿಲ್ಲ-ಶ್ವಾಸ ಬಿಡ ಬೇಕೆಂದರೆ ಲೇಶಮಾತ್ರವೂ ಸ್ವಾಧೀನಭೂತವಾದ ಶಕ್ತಿ ಇಲ್ಲದವರಾಗಿದ್ದಾರೆ. ಈ ಪ್ರಕಾರ ಅನುಷ್ಠಿಸೋಣ ದಾವದದೆ ಇದೇ ಬದುಕಿದ್ದಕ್ಕೆ ಫಲವೆಂದು ತಾತ್ಪರ್ಯ.

ಈ ವಾಕ್ಯ ಯಾವ ನಿಮಿತ್ತ ಹೇಳಿದರೆಂದರೆ ಸರ್ವಪ್ರಾಣಿಗಳಿಗೆ ಕ್ಲೇಶಾನಂದ ಗಳನ್ನ ಪರಮಾತ್ಮನು ಕೊಡತಕ್ಕವನೆಂತಲೂ ಅವರವರು ಭೋಗಮಾಡತಕ್ಕ ಕ್ಲೇಶಾ-ನಂದಗಳು ಈಶಾಧೀನವೇ ಹೊರತು, ಅನ್ಯಾಧೀನವಲ್ಲವೆಂತ ತಾತ್ಪರ್ಯ, ಎಂದರೆ ಅನ್ಯರಾದ ರಮಾಬ್ರಹ್ಮಾದಿಗಳ ಅಧೀನವಲ್ಲ ಎಂಬ ಅರ್ಥವು, ರಮಾಬ್ರಹ್ಮಾದಿಗಳ ಅಧೀನವೂ ಖರೇನೇ. ಉಭಯವಿಧ ಅರ್ಥವು ಹೇಗೆ ಕೂಡುವದೆಂದರೆ (ಕ್ಲೇಶಾ ನಂದಗಳು) ಪರಮಾತ್ಮನ ಅಧೀನ ಎಂಬುದು ಪರಾಪೇಕ್ಷರಹಿತವಾದ ಅಧೀನತ್ವ, ಇಂಥ ಅಧೀನತ್ವ ರಮಾಬ್ರಹ್ಮಾದಿಗಳಿಗೆ ಇಲ್ಲ. ಜೀವರ ಕ್ಲೇಶಾನಂದಗಳು ರಮಾ ಬ್ರಹ್ಮಾದಿಗಳ ಅಧೀನವಲ್ಲ ಎಂಬುದಕ್ಕೆ ಇದು ತಾತ್ಪರ್ಯ. ಇನ್ನು ರಮಾ ಬ್ರಹ್ಮಾದಿ ಗಳ ಅಧೀನವೆಂಬುದು ಪರಾಪೇಕ್ಷೆಯಿಂದ ಅಧೀನವಾಗಿದೆ ಎಂಬರ್ಥದಲ್ಲಿ; ಅಂದರೆ ಪರಮಾತ್ಮನ ಆಜ್ಞಾಧಾರಕರಾಗಿ ಅಧೀನದಲ್ಲಿಟ್ಟುಕೊಂಡಿದ್ದಾರೆ. ಈ ರೀತ್ಯಾ ಪ್ರಾಣಿಗಳ ಕ್ಲೇಶಾನಂದಗಳು ರಮಾಬ್ರಹ್ಮಾದಿಗಳ ಅಧೀನದಲ್ಲಿವೆಯೆಂದು ತಿಳಿಯ ಬೇಕು. ಇದರೊಳಗೆ ತಾರತಮ್ಯಾನುಸಾರ ಪೂರ್ವೋಕ್ತ ಪ್ರಕಾರ ಸ್ವಾವರರ ಕ್ಲೇಶಾ ನಂದಗಳು ಸ್ವೋತ್ತಮರ ಅಧೀನ ಎಂಬೋಣದರಿಂದ ರುದ್ರದೇವರ ಕ್ಲೇಶಾನಂದ ಗಳು ವಾಯುದೇವರ ಅಧೀನ, ಇಂದ್ರದೇವರ ಕ್ಲೇಶಾನಂದಗಳು ರುದ್ರದೇವರಾಧೀನ

* ಕೆಳಗಿನಮಟ್ಟದವರಿಗೆ ಎಂದರ್ಥ.

ಎಂತಲೇ ಆಗತದೆ. ಇನ್ನು ರುದ್ರದೇವರ ಅಧೀನವಾದ ಇಂದ್ರದೇವರ ಕ್ಲೇಶಾನಂದ ಗಳು ರುದ್ರದೇವರ ಅಧೀನ ಉಂಟೇ ಇಲ್ಲವೇ ಎಂದರೆ ? ರುದ್ರದೇವರ ಕ್ಲೇಶಾನಂದ ಗಳು ವಾಯುದೇವರ ಅಧೀನವಾದ ಮೇಲೆ, ರುದ್ರರ ಅವರರಾದ ಇಂದ್ರದೇವ- ದಾರಭ್ಯ ತೃಣಾಂತರವರೆಗೂ ಎಲ್ಲರ ಕ್ಲೇಶಾನಂದಗಳು ಸ್ವೋತ್ತಮರ ಅಧೀನ ವಾಗಿರತವೆಯೆಂದು ತಿಳಿಯಬೇಕು. ಇದೇ ರೀತ್ಯಾ ಬ್ರಹ್ಮಗೆ ಲಕ್ಷ್ಮೀದೇವೇರು, ಲಕ್ಷ್ಮೀದೇವೇರಿಗೆ ಹರಿ: ಹರಿಗೆ ಅನ್ಯಾಧೀನತ್ವ ಇಲ್ಲ, ಸರ್ವೋತ್ತಮ. ಈ ರೀತ್ಯಾ ಸರ್ವ ಜೀವರ ಕ್ಲೇಶಾನಂದಗಳು ಸ್ವಾತಂತ್ರ್ಯತ್ವೇನ ಈಶಾಧೀನ, ಪಾರತಂತ್ರ್ಯತ್ವೇನ ಸ್ವೋತ್ತಮ ದೇವತೆಗಳಾಧೀನ. ಇವರಲ್ಲಿ ಬ್ರಹ್ಮ ವಾಯು ಭಾರತೀ, ಸರಸ್ವತೀ ಮತ್ತು ಲಕ್ಷ್ಮೀದೇವೇರು ಇವರಿಗೆ ಆನಂದ ಮಾತ್ರ, ಕ್ಲೇಶವಿಲ್ಲ. ರುದ್ರಾದಿ ತೃಣಾಂತರಿಗೆ ಕ್ಲೇಶಾನಂದಗಳು ಈಶಾಧೀನವೆಂದರ್ಥ. ಪ್ರಾಣಿಗಳಿಗೆ ಕ್ಲೇಶವಾಗಲೀ ಆನಂದವಾಗಲೀ ಸ್ವಾತಂತ್ರ್ಯತ್ವೇನ ರಮಾ ಬ್ರಹ್ಮಾದಿಗಳು ದಾರೂ ಕೊಡಲಾರರು, ಅವನ್ನು ತಪ್ಪಿಸುವುದಕ್ಕೂ ಸಮರ್ಥರಲ್ಲ. ಈಶಾಧೀನ ಹಾಗೂ ಈಶೇಚ್ಛ ಅನುಸಾರ ವಾಗಿಯೇ ಪ್ರವರ್ತಿಸತಾರೆ. ಆದ್ದರಿಂದ ಲೋಕದಲ್ಲಿ ಕ್ಲೇಶ-ಆನಂದಪಡಿಸಿದ ರೆಂಬುದು, ದ್ವೇಷ (ಅಸೂಯೆ) ಸ್ನೇಹಾದಿಗಳನ್ನು ಹೊಂದದೆ ಸಮಚಿತ್ತರಾಗಿರ ಬೇಕು. ಜ್ಞಾನಾನುಸಂಧಾನ ಇರಬೇಕು.

'ಸಮಾಸಮ ಬ್ರಹ್ಮಸದಾಶಿವರು=(ಪ್ರಕಾರಾಂತರ ಅರ್ಥ). 'ಸಮಾ- ಸಮ'ರು ರಮಾದೇವೇರು—ದೇಶತಃ ಕಾಲತಃ ಸಮಳು, ಗುಣತಃ ಅಸಮಳು. 'ಗುಣ' ಸಾಂಕೇತದಿಂದ 'ಸ್ವಾಖ್ಯ' ಪ್ರದೇಶವೆಂದು ತಾತ್ಪರ್ಯ. ಬ್ರಹ್ಮ- ಸದಾಶಿವರು ಪಾರತಂತ್ರ್ಯದಿಂದ ಅವರರಿಗೆ ಕ್ಲೇಶಾನಂದಗಳನ್ನು ಕೊಡೋದಕ್ಕೆ ಈಶ'ರೆನಿಸಿದರೂ 'ಈಶಿತವ್ಯರು'-ಈಶಾಧೀನರು. ಪರೇಶನಲ್ಲದೇ=ಪರಮಾತ್ಮನ ವ್ಯತಿರಿಕ್ತ ಶ್ವಾಸ ಬಿಡುವುದಕ್ಕೆ ಶಕ್ತಿ ಲೇಶವಾದರೂ ಇಲ್ಲದವರು, ದೇವತೆಗಳೇ, ಈ ರೀತಿಯಾದ ಮ್ಯಾಲೆ ಲೋಕದಲ್ಲಿ ನಮ್ಮನ್ನು ಕೆಡಿಸಿದರು-ಕಾಪಾಡಿದರೆಂಬ ದ್ವೇಷ ಸ್ನೇಹಾದಿಗಳು ಸರಿಯಲ್ಲ. ದೇವರಿಗೆ ಕ್ಲೇಶ ಕೊಡಬೇಕೆಂಬ ಇಚ್ಛಾ ಹುಟ್ಟಿದರೆ ದಾರೂ ಕಾಪಾಡುವುದಿಲ್ಲ. ಆನಂದ ಕೊಡಬೇಕೆಂಬ ಇಚ್ಛೆಯಾದರೆ ದಾರೂ ಕೆಡಿಸು ವುದಕ್ಕೆ ಸಮರ್ಥರಲ್ಲ. ಈ ವಿಧ ಅನುಸಂಧಾನದಿಂದ ದಾರಲ್ಲಿಯೂ ದ್ವೇಷ-ಸ್ನೇಹ ಗಳನ್ನು ಮಾಡದೇ ಈಶ ಸಂಕಲ್ಪವೆಂದು ತಿಳಿದು 'ದ್ವಂದ್ವ' ಸಹನೆಯೇ (ಸಾಧಿಸ ವದೇ) ಬದುಕಿದ್ದಕ್ಕೆ ಫಲ ಎಂತ ತಾತ್ಪರ್ಯ. ಪ್ರಾಪ್ತವಾಗತಕ್ಕ ಸರ್ವ ವಿಷಯ ಗಳಿಗೂ ಇದೇ ನಿಯಮ. ತಮೋಯೋಗ್ಯ, ನಿತ್ಯಸಂಸಾರಿಗಳಲ್ಲಿ ಬಾಹ್ಯ ವಿಷಯ ದಲ್ಲಿ ಇದೇ ನೇಮ. ಸ್ವರೂಪ ಯೋಗ್ಯತಾ ವಿಷಯದಲ್ಲಿ ಅವರರಲ್ಲಿ ದ್ವೇಷ ಮಾಡ ತಕ್ಕದ್ದೇ ಅವಿಚಾರ, ಶಾಸ್ತ್ರಾಂತರದಿಂದ 'ಈಶತವ್ಯ'ರೆಂದು ತಿಳಿಯಬೇಕು

(ಗು) ಶ್ರೀನಾರಾಯಣ ವಿಸ್ಮರಣೆಯೆಂಬೋ ಅಜ್ಞಾನಸಂಬಂಧದಿಂದ ವ್ಯಸನಗಳಾಗೋದು. ನಾರಾಯಣ ವಿಷಯ ಜ್ಞಾನಾನಂದಗಳು—ಈ ಎರಡೂ (ಈಶಾಧೀನ) ಸರ್ವೇಶಚತುರ್ದಶಭುವನಾಧಿಪತಿ ಸರ್ವೋತ್ತಮ ಶ್ರೀನಾರಾಯಣನ ಅಧೀನ, ಅವನ ಆಜ್ಞಾದಿಂದ ಆಗತವೆಂದು ತಿಳಿದು, ಶ್ರೀನಾರಾಯಣ ದೇಶತಃ, ಕಾಲತಃ ಸಮಳು ಶ್ರೀರಮಾದೇವಿ ನಿತ್ಯಮುಕ್ತಳು. ಸತ್ಯಲೋಕಾಭಿಮಾನಿ ಮಹತ್ತತ್ವಾಭಿಮಾನಿ ಬ್ರಹ್ಮ, ಕೈಲಾಸಕ್ಕೆ ಅಧಿಪತಿ ಅಹಂಕಾರತತ್ವ ನಿಯಾಮಕರಾದ ಮಹದೇವರು (ಈಶಿತವ್ಯರು). (ಪರೇಶ) ಉತ್ತಮವಾದ ವೈಕುಂಠಪುರಕ್ಕೆ ಈಶನಾದ ನಾರಾಯಣನ ವಿನಾ ಶ್ವಾಸೋಚ್ಛ್ವಾಸ ಬಿಡಲಿಕ್ಕೆ, ತೆಗೆದುಕೊಳ್ಳಲಿಕ್ಕೆ ಲೇಶಮಾತ್ರ ಶಕ್ತರಾಗುವುದಿಲ್ಲವೆಂಬುದು ದಾಸನಾಗಿ ಅಹಂಭಾವ ಜರಿದು ಪರಾಧೀನನಾಗಿ ಆಚರಣ ಮಾಡುವದು ಫಲವಿದು ಬಾಳ್ದುದಕೆ.

ಕ್ಲೇಶ-ದುಃಖ, ಕಷ್ಟ. ಈಶಾಧೀನ-ಭಗವದಧೀನ. ಈಶ್ವರ- ಶಿವ. ಈಶಿತವ್ಯರು-ನಿಯಮ್ಯರು (ಅಧೀನರು). ಪರೇಶ-ಸರ್ವೋತ್ತಮನಾದ ಶ್ರೀಹರಿ.

(ಭೀ) ಕ್ಲೇಶಾನಂದಗಳೀಶಾಧೀನ–'ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ' ಎಂಬ ಗೀತಾವಾಕ್ಯದಂತೆ ಸುಖದುಃಖಗಳಿಂದ ಹಿಗ್ಗು-ಕುಗ್ಗುಗಳಿಗೆ ಒಳಗಾಗದವನೇ ಮೋಕ್ಷಾಧಿಕಾರಿಯೆಂದಿರುವುದರಿಂದ ಸುಖ-ದುಃಖಗಳೆರಡೂ ಭಗವತ್‌ಪ್ರೇರಣೆಯಿಂದ ಲಭಿಸುತ್ತವೆಯೆಂದು ತಿಳಿದು ಅವನ್ನು ಅನುಭವಿಸಬೇಕು. (೨) ಸಮಾಸಮ-"ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ । ಬ್ರಹ್ಮಾದ್ಯಾಸ್ತ್ವಸಮಾಃಪ್ರೋಕ್ತಾಃಪ್ರಕೃತಿಶ್ಚ ಸಮಾಸಮಾ ॥' ಎಂಬ ಸೂತ್ರಭಾಷ್ಯೋದಾಹೃತ ವರಾಹಪುರಾಣವಾಕ್ಯಾನುಸಾರ ಮತ್ಸ್ಯಕೂರ್ಮವರಾಹಾದಿ ರೂಪಗಳು ವಿಷ್ಣುವಿಗೆ 'ಸಮರೂಪ'ಗಳು. ಬ್ರಹ್ಮಾದಿಗಳು 'ಅಸಮರೂಪ'ಗಳು. ಲಕ್ಷ್ಮೀದೇವಿ ಕೆಲವು ವಿಷಯದಲ್ಲಿ(ದೇಶತಃ ಕಾಲತಃ)ಸಮಳೂ ಕೆಲವು ವಿಷಯದಲ್ಲಿ(ಗುಣತಃ) ಅಸಮಳಾದ್ದರಿಂದ ಸಮಾಸಮಳು. 'ಅನಂತಾನಂತಗುಣತ ಇಂದಿರಾಯಾಃ ಪರೋ ಹರಿಃ' ಎಂಬ ಸತ್ತತ್ವರತ್ನಮಾಲಾ ವಾಕ್ಯದಂತೆ ಶ್ರೀಹರಿಯು ರಮಾದೇವೇರಿಗಿಂತ ಅನಂತಾನಂತಗುಣ ಅಧಿಕನು. (೩) ಶ್ವಾಸಬಿಡುವ-ಶ್ವಾಸಮುಖ್ಯಪ್ರಾಣನು ಸಕಲ ಜೀವರ ಹೃದಯದಲ್ಲಿದ್ದು ಶ್ವಾಸೋಚ್ಛ್ವಾಸ ಜಪಿಸಿದರೆ ಮಾತ್ರವೇ ಆ ಪ್ರಾಣಿಗಳು ಬದುಕುತ್ತವೆ. ಇಲ್ಲದಿದ್ದರೆ ನಿಶ್ಚೇತನವಾಗುತ್ತವೆ. ಅಂಥಾ ಪ್ರಾಣದೇವರಿಗೇ ಆ ಶಕ್ತಿಯನ್ನು ಕೊಟ್ಟವನು ಶ್ರೀಹರಿಯಾದ್ದರಿಂದ ಅವನನ್ನು 'ಪ್ರಾಣಸ್ಯ ಪ್ರಾಣಃ' ಎಂದು ಐತರೇಯೋಪನಿಷತ್ತು ಹೇಳುತ್ತದೆ. ಅದನ್ನೇ ಶ್ರೀಮದಾಚಾರ್ಯರ ಐತರೇಯಭಾಷ್ಯದ ಮಂಗಳಶ್ಲೋಕದಲ್ಲಿ 'ಪ್ರಾಣಸ್ಯ ಸರ್ವಚಿದಚಿತ್ಪರಮೇಶ್ವರಸ್ಯ ಸಾಕ್ಷಾದಧೀಶ್ವರಂ' ಎಂದು ಹೇಳಿದ್ದಾರೆ.

**ಪಕ್ಷ್ಮಗಳಕ್ಷಿಗಳಗಲದಲಿಪ್ಪಂತೆ (ರಕ್ಷಿಸುವಂದದಲಿ) ।**
**ಅಕ್ಷರ ಪುರುಷನ (ಪೂಜ್ಯನ) (ಪೇಕ್ಷೆಯಲಿ) ಪೇಕ್ಷಿಸುತಲೀ ॥**
**ಕುಕ್ಷಿಯೊಳಬ್ಜ ತ್ರ್ಯಕ್ಷಾದ್ಯಮರರ ।**
**ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ ॥೨೪॥**

ಈ ನುಡಿ ಇತರತ್ರ ೨೩ ಎಂದಿದೆ.

[ಸೂಚನೆ-ಈ ನುಡಿಯ ಮೊದಲ ಪಂಕ್ತಿಯಲ್ಲಿ ಹೀಗೆ ಪದಚ್ಛೇದಮಾಡಬೇಕು-ಪಕ್ಷ್ಮಗಳು(ರೆಪ್ಪೆಗಳು), ಅಕ್ಷಿಗಳ (ಕಣ್ಣುಗಳನ್ನು), ಅಗಲದಲಿ-(ಬಿಟ್ಟುಹೋಗದೆ), ಇಪ್ಪಂತೆ (ಇರುವಂತೆ)]

**ಪಕ್ಷ್ಮಗಳು**=ಕಣ್ಣುರೆಪ್ಪೆಗಳು, **ಅಕ್ಷಿಗಳ**=ನೇತ್ರದ್ವಯವನ್ನ, **ಅಗಲದಲಿಪ್ಪಂತೆ**=ನೇತ್ರಗಳನ್ನು ರೆಪ್ಪೆಗಳು ಅಗಲಧಾಂಗೆ ಇದ್ದು; ರೆಪ್ಪೆಗಳಿಗೆ ಅದರಿಂದ ಸ್ವಪ್ರಯೋಜನವಿಲ್ಲದಿದ್ದರೂ, ಎಲ್ಲ ಕಾಲಕ್ಕೂ ಎಡೆಬಿಡದೆ ಕ್ಷಣಕ್ಷಣದಲ್ಲಿಯೂ, ಆ ನೇತ್ರಗಳಿಗೆ—ರೆಪ್ಪೆ ಮುಚ್ಚೋಣ ತೆರೆಯೋಣ ದ್ವಾರಾ ಹ್ಯಾಂಗೆ ಸಂರಕ್ಷಣಮಾಡ ತಪೆಯೋ ತದ್ವತ್ ಜೀವಾಂತರ್ಗತ ಬಿಂಬನು ಎಂದೆಂದಿಗೂ ಅಗಲದೇ ಇದ್ದು ಕ್ಷಣ-ಲವಾದಿಕಾಲಗಳಲ್ಲಿ ಸ್ವಪ್ರಯೋಜನರಹಿತನಾಗಿ ರಕ್ಷಿಸತಾನೆಂದು ತಾತ್ಪರ್ಯ. ಯಾರನ್ನು ಸಂರಕ್ಷಣ ಮಾಡತಾನೆಂದರೆ **'ಅಕ್ಷರ'**=ರಮಾದೇವಿಗೆ, **ಪುರುಷ**-ಪತಿಯಾದ ಬಿಂಬಹರಿ, ಇವನೇ ಸರ್ವೋತ್ತಮ, ಸರ್ವತಂತ್ರಸ್ವತಂತ್ರ, ಸರ್ವ ಜಗದ್ರಕ್ಷಕನು, ಅನಾದಿಸ್ವರೂಪ ಸ್ವಭಾವದಲಿ ಇರತಕ್ಕ ಇಂಥಾ ಜೀವರು **'ಅಪೇಕ್ಷೆಯಲಿ'** –ಅನ್ಯರ ಅಪೇಕ್ಷೆಮಾಡದೆ ಪರಮಾತ್ಮನನ್ನೇ ಸರ್ವತ್ರ ಅಪೇಕ್ಷೆ ಮಾಡತಾ-ಬಿಂಬಾಪರೋಕ್ಷಗೋಸುಗ, ಇರುವವರನ್ನ ಸಂರಕ್ಷಣಮಾಡತಾನೆ. ಹೇಗೆಂದರೆ ದುಃಖಕ್ಕೆ ಮೂಲವಾದ ಅಹಂ-ಮಮ ಎಂಬ ಉಪಾಧಿಯಿಂದ ಸಂರಕ್ಷಣೆಮಾಡತಾನೆ. ಧೂಳಿ ಎದ್ದಕಾಲಕ್ಕೆ ಆ ಧೂಳಿ ನೇತ್ರವನ್ನು ಬಾಧಿಸದಂತೆ ರೆಪ್ಪೆಗಳು ರಕ್ಷಿಸುವಂತೆ ಭಕ್ತರನ್ನ ವಿಷಯಾಶಾ ಎಂಬ ಗಾಳಿಯಿಂದ (ಎದ್ದ) ಅಹಂ–ಮಮ ಧೂಳಿಗಳು ಬಾಧಿಸೋಕಾಲಕ್ಕೆ ಅಡ್ಡಬಂದು ಅವುಗಳ ಲೇಪ ಇಲ್ಲದಂತೆ ನಿರ್ಲಿಪ್ತನ್ನ ಮಾಡತಾನೆ-ತನ್ನ ವಿಷಯಕ ಜ್ಞಾನಾನುಸಂಧಾನದ್ವಾರಾ ಎಂದರ್ಥ. **ಕುಕ್ಷಿಯೊಳು**=ಹೊಟ್ಟೆಯೊಳಗೆ, **ಅಬ್ಜಜ**=ಬ್ರಹ್ಮ, **ತ್ರ್ಯಕ್ಷ**=ರುದ್ರ, **ಆದ್ಯಮರರು**=ಮೊದಲಾದ ದೇವತೆಗಳು, ಮುಕ್ತಿಯೋಗ್ಯ ದೇವತಾದಿ ತೃಣಾಂತರವರೆಗಿನವರು—ಇವರ ಉದರ ದಲಿ ಇದ್ದವನಾಗಿ, **ಈಕ್ಷಿಸಿ**=ಅವರವರ ಯೋಗ್ಯತಾ ತಾರತಮ್ಯವನನುಸರಿಸಿ ನೋಡತಾ, **ಕರುಣದಿ ರಕ್ಷಿಪನೆಂಬುದೆ**=ಸಾಧನದೇಹಗತ ಕರಣಗಳಲ್ಲಿದ್ದು ಇಂದ್ರಿಯಗಳನ್ನು ನಶ್ವರವಾದ ವಿಷಯಗಳಲ್ಲಿ ಪ್ರವೇಶಮಾಡಿಸದೆ, ತನ್ನಲ್ಲಿ ಪ್ರವೇಶ ಮಾಡುವಂತೆ ಇಂದ್ರಿಯಾಭಿಮಾನಿ ದೇವತೆಗಳ ದ್ವಾರಾ ಸಾಧನ ಮಾಡಿಸಿ, ಪರ್ಯವ-ಸಾನಕ್ಕೆ ಲಿಂಗಭಂಗ ಹೊಂದಿಸಿ, ಸ್ವರೂಪಾನಂದವನ್ನು ವ್ಯಕ್ತಮಾಡಿ, ಪುನಃ

ಸಂಸಾರಕ್ಕೆ ಬಾರದಂತೆ, ರಕ್ಷಿಪನೆಂಬೋದೇ = ರಕ್ಷಿಸತಾನೆಂದು (ದೃಢವಾಗಿ) ತಿಳಿಯುವದೇ ಬದುಕಿದ್ದಕ್ಕೆ ಫಲ. ತಮೋಯೋಗ್ಯ, ನಿತ್ಯಸಂಸಾರಿಗಳಿಗೆ ಅವರವರ ಯೋಗ್ಯತೆಯನುಸರಿಸಿ. ಮುಕ್ತಿಯೋಗ್ಯರ ವಿವಕ್ಷಯಾ ವಿಪರೀತವೆಂದು ತಿಳಿಯಬೇಕು. 'ಕರುಣದಲಿ' ಎಂತಲೂ ಒಂದು ಪಾಠವಿದೆ, ಕರುಣೆಯಿಂದ ರಕ್ಷಿಸತಾನೆಂದರ್ಥ. ತಾರತಮ್ಯ, ಪಂಚಭೇದ ಸತ್ಯವೆಂದರಿದು ವಿಷಯಗಳಲ್ಲಿ ಆಸಕ್ತನಾಗದೆ ಜನ್ಮವೆತ್ತಿದ್ದು ಸಾಧನೆಮಾಡಿ ಮೋಕ್ಷ ಐದೋದಕ್ಕೆಂದರಿದು ಸರ್ವರ ಉದರದಲ್ಲಿದ್ದು ಪರಮಾತ್ಮನೇ ರಕ್ಷಿಸುವನು, ಅನ್ಯರಲ್ಲವೆಂಬ ಅನುಷ್ಠಾನದಿಂದ ಈ ದಾರ್ಢ್ಯ ಹುಟ್ಟುವುದಕ್ಕೆ ಹೇಳಲ್ಪಟ್ಟಿತು.

(ಗು) ಕಣ್ಣಮಾನೆಗಳು ನೇತ್ರಗಳನ ಊರ್ಧ್ವಯುವಿ ಅಧೋರೆಪ್ಪೆಗಳು ಅರೆಕ್ಷಣ ಬಿಡದಲೆ ಕಣ್ಣುಗಳ ರಕ್ಷಣ ಮಾಡಿಕೊಂಡು ದಾವ ಪ್ರಕಾರ ಇರುವವೋ ಆ ಪ್ರಕಾರದಲ್ಲಿ ಅಕ್ಷರಳೆನಿಸಿಕೊಂಡು ಅಸ್ಪೃಶ್ಯಳಾದ ನಿತ್ಯಮುಕ್ತಳು ಶ್ರೀರಮಾದೇವಿ. ಆಕೆಯ ಪತಿಯಾದ ಪೂಜ್ಯ ಶ್ರೀನಾರಾಯಣನ ಇಚ್ಛಾದಿಂದ ವಾಸುದೇವ ತನ್ನ ಉದರದೊಳಗೆ ಬ್ರಹ್ಮರುದ್ರೇಂದ್ರಾದಿ ದೇವತೆಗಳನ್ನ ಕರುಣದೃಷ್ಟಿಯಿಂದ ನೋಡಿ ಇಹಪರದಲ್ಲಿ ಸಂರಕ್ಷಣ ಮಾಡತಾನೆಂಬುದೆ ಫಲವಿದು ಬಾಳ್ದುದಕೆ.

ಪಕ್ಷ್ಮಗಳು-ರೆಪ್ಪೆಗಳು, ಅಕ್ಷಿಗಳ-ಕಣ್ಣುಗಳನ್ನು, ಅನಪೇಕ್ಷೆಯಲಿ-ಪ್ರತಿಫಲಾಪೇಕ್ಷೆಯಿಲ್ಲದೆ. ಕುಕ್ಷಿಯೊಳು-ಹೊಟ್ಟೆಯಲ್ಲಿ, ಅಬ್ಜಜ-(ಅಬ್ಜ-ಕಮಲದಲ್ಲಿ, ಜ-ಹುಟ್ಟಿದವನು) ಬ್ರಹ್ಮ, ತ್ರ್ಯಕ್ಷ-(ತ್ರಿ-ಮೂರು, ಅಕ್ಷ-ಕಣ್ಣುಳ್ಳವನು) ರುದ್ರ, ಶಿವ, ಆದಿ-ಅಮರರ-ಮೊದಲಾದ ದೇವತೆಗಳನ್ನು, ಈಕ್ಷಿಸಿ-ನೋಡಿ,

(ಭೀ) ಪಕ್ಷ್ಮಗಳು ಅಕ್ಷಿಗಳ ರಕ್ಷಿಸುವಂದದಲಿ-ರೆಪ್ಪೆಗಳು ಕಣ್ಣುಗಳಿಗೆ ಧೂಳು ಮೊದಲಾದುವು ಬೀಳದಂತೆ, ಹಗಲೂರಾತ್ರೆ ಜೊತೆಗೇ ಇದ್ದು ರಕ್ಷಿಸುತ್ತವೆಯಾದರೂ ಅದಕ್ಕೆ ಯಾವ ಸ್ವಪ್ರಯೋಜನವೂ ಇಲ್ಲ. ಇದೇ ರೀತಿ ಕೈಗಳು ಮೈಗೆ ನೆವೆಯಾದಾಗ ಕೆರೆದು ಸಹಾಯ ಮಾಡುತ್ತವೆ. ಹಲ್ಲುಗಳು ಫಲಾದಿಗಳನ್ನು ಅಗಿದು ಜಿಹ್ವೆಗೆ ರಸ ಕೊಡುತ್ತವೆಯಾದರೂ ಅವಕ್ಕೆ ಸ್ವಪ್ರಯೋಜನವೇನೂ ಇಲ್ಲ. ಹೀಗೆಯೇ ಶ್ರೀಹರಿಯೂ ನಿರ್ವ್ಯಾಜ ರಕ್ಷಕನಾಗಿದ್ದಾನೆ. (೨) ಅಕ್ಷರಪುರುಷ-ದೇಹನಾಶವುಳ್ಳ ಜೀವರೆಲ್ಲರೂ ಕ್ಷರಪುರುಷರು. ನಿತ್ಯಮುಕ್ತಳೂ ನಿತ್ಯಸಚ್ಚಿದಾನಂದಾತ್ಮಕ ದೇಹವುಳ್ಳ ಲಕ್ಷ್ಮೀದೇವಿಯು ಅಕ್ಷರಳು. ಇವರಿಬ್ಬರಿಗೂ ಅತ್ಯಂತಭಿನ್ನನೂ ಸ್ವತಂತ್ರನೂ ಸರ್ವೋತ್ತಮನೂ ಆದ ಶ್ರೀಹರಿ ಅಕ್ಷರಪುರುಷ, 'ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿ-ರಪೂರ್ಣತಾ । ನಾಶಶ್ಚತುರ್ವಿಧಃ' ಎಂಬಂತೆ ಅಶಾಶ್ವತತ್ವ, ದೇಹ ಬಿದ್ದು ಹೋಗುವುದು, ದುಃಖವಾಗುವುದು ಮತ್ತು ಅಪೂರ್ಣತ್ವ ಎಂದು ನಾಶವು ನಾಲ್ಕು ವಿಧವಾಗಿದೆ. ಶ್ರೀಹರಿಗೆ ಈ ನಾಲ್ಕು ಬಗೆಯ ನಾಶಗಳೂ ಇಲ್ಲವಾದ್ದರಿಂದ ಅವನು

ಅಕ್ಷರಪುರುಷನೆನಿಸುತ್ತಾನೆ (ಕ್ಷರ-ನಾಶವು, ಅ-ಇಲ್ಲದ). (೩) ರಕ್ಷಿಪನೆಂಬುದೆ-ವಿಷ್ಣು ರಹಸ್ಯದಲ್ಲಿ ಹೇಳಿದಂತೆ 'ರಕ್ಷಿಷ್ಯತೀತಿ ವಿಶ್ವಾಸ-ಸ್ತದೀಯೋsಹಮಿತಿ ಸ್ಮೃತಿಃ। ಶರಣಾಗತಿರೇಷಾಸ್ಯಾದ್ ವಿಷ್ಣೋ ಮೋಕ್ಷಪ್ರದಾಯಿನೀ॥ 'ಶ್ರೀಹರಿ ತಪ್ಪದೆ ರಕ್ಷಿಸುತ್ತಾನೆಂಬ ವಿಶ್ವಾಸಪೂರ್ವಕವಾಗಿ ನಾನು ಅವನ ದಾಸನೆಂಬ ಬುದ್ಧಿಯಿಂದ ಅವನನ್ನು ಶರಣು ಹೊಂದುವುದೊಂದೇ ಮೋಕ್ಷಕ್ಕೆ ಮಾರ್ಗ ಎಂದಿರುವುದರಿಂದ ಅವನನ್ನು ಶರಣುಹೊಂದುವುದೇ ಬದುಕಿನ ಸಾಫಲ್ಯ.

ಮೂಜಗದೊಳಗಿಹ ಭೂಚರ (ಭೂಜಲ)
ಖೇಚರ ಜಲ(ವಾರಿ) ನಿಶಾಚರ
ಈ ಜೀವರೊಳು ಮಹೌಜಸನ ॥
ಸೋಜಿಗ ಬಹುವಿಧ ವಿಭೂತಿಯು (ನೈಜ ವಿಭೂತಿಯು) ।
ಪೂಜಿಸುತನುದಿನ ರಾಜಿಸುತಿಪ್ಪುದೆ ॥೨೫॥

(ಈ ನುಡಿ ಕೆಲವೆಡೆ ೧೮, ೧೯, ೨೦ ಎಂದಿದೆ.)

ಮೂಜಗದೊಳಗೆ = ಹದಿನಾಲ್ಕು ಲೋಕಗಳಲ್ಲಿ ಇಹ- ವಿದ್ಯಮಾನರಾದ, ಭೂಚರ = ಭೂಮಿಯಲ್ಲಿ ಚರಿಸುವ, ಖೇಚರ = ಆಕಾಶದಲ್ಲಿ ಸಂಚರಿಸುವ, ವಾರಿ = ಜಲದಲ್ಲಿ ಸಂಚರಿಸುವ, ನಿಶಾಚರ = ರಾತ್ರಿಕಾಲದಿ ಸಂಚರಿಸುವ, ಈ ಜೀವರೊಳು = ಇವುಗಳಲ್ಲಿಯ ತ್ರಿವಿಧ ಜೀವರೊಳಗೆ-ಇದರಲ್ಲಿ ತೃಣಜೀವರು ಅಂತರ್ಭೂತರು: ಮಹೌಜಸನೆ = ದಾರಿಂದಲೂ ಪರಾಜಯ ಹೊಂದದ ಪರಮಾತ್ಮನ, ಬ್ರಹ್ಮಾದಿಗಳು ತಾರತಮ್ಯಾನುಸಾರ ಅಧಿಕಾಧಿಕ ಬಲಶಾಲಿಗಳು ತದಪೇಕ್ಷಯಾ ಅಧಿಕ ಬಲಶಾಲಿ ರಮಾದೇವೇರು. ಇವರ ಬಲ ಯಾವತ್ತೂ, ಈಶಾಧೀನ. ಮಹೌಜಸನೆ- ರಮಾ ಬ್ರಹ್ಮಾದಿಗಳ ಕಲ್ಯಾದಿಗಳ ಬಲಗಳಿಗೆ ಅವಧಿ ಉಂಟು. ಪರಮಾತ್ಮನ ಬಲಕ್ಕೆ ಅವಧಿ ಇಲ್ಲ. ಇಂಥಾ ಮಹೌಜಸನ, ಸೋಜಿಗ = ಲೋಕಕ್ಕೆ ಅಶ್ಚರ್ಯಕರವಾದ. ನೈಜ = ಅನಾದ್ಯನಂತ ಕಾಲಕ್ಕೂ ಕೆಡದೇ ಇರುವ, ವಿಭೂತಿಯು = ಅಣಿಮಾದಿ ಅಷ್ಟವಿಭೂತಿ ಉಳ್ಳ ಭಗವಂತನನ್ನು, ಪೂಜಿಸುತ = ಅಧಿಷ್ಠಾನ ತಾರತಮ್ಯಾನುಸಾರ ವಿಧಿವತ್. ಆಯಾ ಅಧಿಷ್ಠಾನಗತ ಪರಮಾತ್ಮನ ಪೂಜಾಮಾಡುವ ರೀತಿಯನ್ನ ತಿಳಿದು ಅದರಂತೆ, ಅನುದಿನ = ಪ್ರತಿದಿನಗಳಲ್ಲಿಯೂ ಪೂಜಿಸುತಿರುವದೇ ಬದುಕಿದ್ದಕ್ಕೆ ಫಲ, ದೇವತೆಗಳಿಗೂ ಅಣಿಮಾದಿ ವಿಭೂತಿ ಉಂಟು, ಆದರೆ ನೈಜವಲ್ಲ, ಬಾಹ್ಯಸ್ಥೂಲದೇಹ ವಿವಕ್ಷಯಾ ವಿಭೂತಿ, ಸ್ವರೂಪತಃ ವಿಭೂತಿ ಅಲ್ಲ. ಅತ ಏವ ಜೀವರಿಗೆ ಮೋಕ್ಷದಲ್ಲಿ ಅಣಿಮಾದಿ (ವಿಭೂತಿ)ಗಳಿಲ್ಲ, ಯಾಕೆಂದರೆ ಸ್ವರೂಪ ಅನಾದಿ, ವೃದ್ಧಿಹ್ರಾಸಗಳಿಲ್ಲದ ಅಣುಸ್ವರೂಪ ಎಂತ ಪ್ರಮಾಣದಿಂದ ನೇಮ. ಆದ್ದರಿಂದ ಸ್ವರೂಪಕ್ಕೆ ಅಣಿಮಾದಿಗಳಿಲ್ಲ, ಇದರ ದ್ಯೋತನಾರ್ಥ ನೈಜ ಶಬ್ದ, ಶಬ್ದಪ್ರಯೋಗ

ದಲ್ಲಿದೆ. ರಾಜಿಸುತಿಪ್ಪುದೆ=ಲೋಕದ ಭಯದಿಂದ ರಹಿತನಾಗಿ ಪ್ರಕಾಶಮಾನ ನಾಗುತಾ ಇರೋಣವೇ ಬದುಕಿದ್ದಕ್ಕೆ ಫಲ.

(ಗು) ಬ್ರಹ್ಮಾಂಡದ ಜಗತ್ತಿನಲ್ಲಿ ಸಂಚಾರ ಮಾಡುವಂಥ ಸತ್ವಜೀವರು, ರಾಜಸಜೀವರು, ತಾಮಸರು, ನರಮೃಗಪಶ್ವಾದಿಗಳು ಜಲದಲ್ಲಿ ಸಂಚಾರಮಾಡುವಂಥ ಮತ್ಸ್ಯಾದಿ ಮಂಡೂಕ ಏವಮಾದಿ ಪ್ರಾಣಿಗಳು, ಆಕಾಶದಲ್ಲಿ ಸಂಚಾರಮಾಡುವಂಥ ಗರುಡಪಕ್ಷಿ ಮೊದಲಾದ ಈ ಜೀವರೊಳು ಮಹಾಮಹಿಮೋಪೇತನಾದ ನಾರಾಯಣನ ಆಶ್ಚರ್ಯವಾಗಿ ವಿವಿಧವಾಗಿ ಅನಂತಾನಂತ ರೂಪಗಳು ವ್ಯಾಪ್ತ ವಾದಂಥ ನೈಜ=ಶಶ್ವದೇಕ ಪ್ರಕಾರವಾಗಿ ಸಹಜವಾಗಿರುವ ವಿಭೂತಿಯು ತತ್ತ ದಾಕಾರನಾಗಿ ತತ್ತದ್ರೂಪದಿಂದ 'ತತ್ತಚ್ಛಬ್ದ ವಾಚ್ಯನಾಗಿ ತನ್ನಾಮದಿಂದ ಶ್ರೀ ನಾರಾಯಣನ ವಿಭೂತಿ ರೂಪಗಳ ಪೂಜಿಸುತ ಬ್ರಹ್ಮಾಂಡ ಪಿಂಡಾಂಡದೊಳಗೆ ನಿತ್ಯ ದಲ್ಲಿ ವಿರಾಜಿಸುತಿಪ್ಪುದೆ. ಈ ಪ್ರಕಾರ ಶ್ರೀನಾರಾಯಣನ ಸ್ತೋತ್ರಮಾಡುತ ಆಚರಣೆಮಾಡುತ ಇಪ್ಪುದೇ ಸಫಲ ಬಾಳ್ದುದಕೆ.

ಭೂ ಜಲ ಖೇಚರ—ಭೂಚರ-ನೆಲದಮೇಲೆ ಆಡ್ಡಾಡುವ ಮನುಷ್ಯರು ಮತ್ತು ಪ್ರಾಣಿಗಳು, ಜಲಚರ-ನೀರಿನಲ್ಲಿ ಆಡ್ಡಾಡುವ ಮೀನು ಮೊಸಳೆ ಮೊದಲಾದ ಪ್ರಾಣಿಗಳು. ಖೇಚರ-ಆಕಾಶದಲ್ಲಿ ಹಾರಾಡುವ ಪಕ್ಷಿಗಳು, ಮಹೌಜಸನ (ಮಹಾ+ ಓಜಸ್=ಶಕ್ತಿ) ಅಚಿಂತ್ಯಾದ್ಭುತ ಶಕ್ತಿಯುಳ್ಳ ಭಗವಂತನ. ನೈಜ ವಿಭೂತಿಯು- ತನ್ನ ವಿಭೂತಿರೂಪಗಳನ್ನು. ರಾಜಿಸು-ಪ್ರಕಾಶಿಸು, ವಿರಾಜಿಸು.

(ಭೀ.) 'ತ್ರಿಕೋಟಿರೂಪ: ಪವನಶ್ಚ ಮೇ ಸುತಃ' ಎಂದು ಭಾರತ ತಾತ್ಪರ್ಯನಿರ್ಣಯದಲ್ಲಿ ಹೇಳಿದಂತೆಯೂ "ಖೇಟ ಕುಕ್ಕುಟ ಜಲಟವೆಂಬ ತ್ರಿ। ಕೋಟಿ ರೂಪವ ಧರಿಸಿ ಸತತ ನಿ। ಶಾಟರನ ಸಂಹರಿಸಿ ಸಲಹುವ ಸಜ್ಜನರ ॥" ಎಂದು ಹರಿಕಥಾಮೃತಸಾರದಲ್ಲಿ (೨೩. ಸಂ. ೨೦ ಪದ್ಯ) ಹೇಳಿದಂತೆಯೂ ಪ್ರಾಣ- ದೇವರು ತ್ರಿವಿಧ ಜೀವರಲ್ಲಿದ್ದು ರಕ್ಷಣೆಮಾಡುವರು. ಅವರ ಅಂತರ್ಗತನಾಗಿದ್ದು ಅವರಿಗೆ ಪ್ರೇರಕನಾಗಿ ಶ್ರೀ ಹರಿಯೇ ಎಲ್ಲ ಕಾರ್ಯಗಳನ್ನು ನಡೆಸುತ್ತಾ ಎಲ್ಲರನ್ನೂ ರಕ್ಷಿಸುತ್ತಾನೆಂದು ತಿಳಿಯುವುದೇ ಬಾಳಿಗೆ ಪ್ರಧಾನ ಫಲವೆಂದು ಭಾವ. ಭೂ ಚರಾದಿ ಪ್ರಾಣಿಗಳಲ್ಲಿ ಸಜಾತೀಯ ವಸ್ತುಗಳಲ್ಲಿ ವಿಶಿಷ್ಟವಾದವುಗಳಲ್ಲಿರುವ ಭಗವಂತನ ವಿಭೂತಿರೂಪಗಳನ್ನು ಗೀತೆಯಲ್ಲಿ ಹೇಳಿದ್ದನ್ನೂ ಹರಿಕಥಾಮೃತಸಾರದ ವಿಭೂತಿಸಂಧಿಯಲ್ಲಿ ಹೇಳಿದ ರೂಪಗಳನ್ನೂ ಚಿಂತಿಸಿ ಸರ್ವರಕ್ಷಕನೆಂಬುದನ್ನು ಗ್ರಹಿಸಬೇಕು.

**ವಿಷಯೇಂದ್ರಿಯಗಳಲಿ ತದಭಿಮಾನಿ ಸುಮ ।**
**ನಸರೊಳು ನಿಂದು ನಿಯಾಮಿಸುತಾ ॥**

**ಶ್ವಸನಾಂತರ್ಗತ ವಾಸುದೇವ ತಾ ।**
**ವಿಷಯಂಗಳ ಭೋಗಿಸು (ತಿಹನೆಂಬುದೆ) ವನೆಂದರಿವುದೆ ॥೨೬॥**

ಈ ನುಡಿ ಕೆಲವೆಡೆ ೧೮ ಎಂದೂ ೧೯ ಎಂದೂ ಇದೆ,

ಇಂದ್ರಿಯಾಭಿಮಾನಿಗಳ ಅಂತರ್ಗತನಾದ ಹರಿ, **ಶ್ವಸನಾಂತರ್ಗತ**-ವಾಯು ಅಂತರ್ಗತನೆಂದು ಚಿಂತಿಸತಾ, **ವಾಸುದೇವ ತಾ** = ತಾನೇ ವಾಸುದೇವ ರೂಪದಿಂದ ಇಂದ್ರಿಯಗಳಲ್ಲಿದ್ದು, **ವಿಷಯಂಗಳ ಭೋಗಿಸುವನು** = ಇಂದ್ರಿಯಗಳಲ್ಲಿ ಇಂದ್ರಿಯವಾಚ್ಯನಾಗಿ ವಿಷಯಗಳಲ್ಲಿ ವಿಷಯವಾಚ್ಯನಾಗಿ ತನ್ನ ಸ್ವಾಖ್ಯ ಇಂದ್ರಿಯಗಳಿಂದ ಸ್ವಾಪ್ಯ ವಿಷಯಗಳನ್ನು ಭೋಗ ಮಾಡತಾ, ತನ್ನ ಸ್ವಾಖ್ಯಭೋಗ ಕ್ರಿಯಾದ್ವಾರಾ ಜಡವಿಷಯಗಳನ್ನು ಜೀವಗೆ ಭೋಗ ಮಾಡಿಸತಾನೆ. ಹರಿಗೆ ಜಡ-ವಿಷಯ ಭೋಗವಿಲ್ಲ. **ಎಂದರಿವುದೆ** = ಈ ವಿಧಅನುಸಂಧಾನಯುಕ್ತ ಆಚರಣೆಯೇ ಬದುಕಿದ್ದಕ್ಕೆ ಫಲ. ಇದರಿಂದ ದೇಹೇಂದ್ರಿಯಾದಿಗಳೂ ಅವುಗಳ ವ್ಯಾಪಾರಗಳೂ ಈಶ್ವರಾಧೀನ, ಹಾಗೆಯೇ ದಾರಾ ಪುತ್ರಾದಿಗಳು, ಪಶು ಧಾನ್ಯಾಧಿಗಳು (ದ್ರವ್ಯ) ಈಶಾಧೀನ. ಕಿಂ ಬಹುನಾ*, ಸರ್ವವೂ ಈಶಾಧೀನ-ಸರ್ವವೂ ಈಶ್ವರನದು ತನ್ನದಲ್ಲವೆಂಬ ಜ್ಞಾನಾನುಸಂಧಾನಕ್ಕೆ ತರಬೇಕೆಂಬುದಕ್ಕಾಗಿ ಈ ಚರಣ ಪ್ರಸಕ್ತಿ ಎಂತ ತಿಳಿಯಬೇಕು.

(ಗು) **ವಿಷಯೇಂದ್ರಿಯಗಳಲಿ** = ದಶೇಂದ್ರಿಯಗಳ ವಿಷಯಗಳಲ್ಲಿ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳಲ್ಲಿ (ಹಾಗೂ ಮನಸ್ಸಿನಲ್ಲೂ) ತದಭಿಮಾನಿಗಳಾದ **ಸುಮನಸರೊಳು** = ತತ್ವಾಭಿಮಾನಿಗಳಂತರ್ಗತನಾಗಿ ಪ್ರೇರಿಸುವಂಥ ಮುಖ್ಯಪ್ರಾಣಾಂತರ್ಗತ ಮಾಯಾಪತಿ ಶ್ರೀವಾಸುದೇವ ಮುಖ್ಯವಾಗಿ ತಾನೇ ಸಕಲೇಂದ್ರಿಯಗಳಲ್ಲಿ ವ್ಯಾಪ್ತನಾಗಿ ಸಮಸ್ತ ವಿಷಯಗಳ ಶುಭರಸ ಸ್ವೀಕಾರ ಮಾಡಿ ಸ್ವಾಮಿ ಭೋಗಿಸತಿಹನೆಂದು ತಿಳಿದು ಕೊಂಡಾಡುವದೇ ಫಲವಿದು,

ವಿಷಯೇಂದ್ರಿಯಗಳ ವಿವರಣೆ—ಪಂಚಜ್ಞಾನೇಂದ್ರಿಯಗಳು-೧, ಘ್ರಾಣೇಂದ್ರಿಯಕ್ಕೆ ವಾಸನೆ, ಜಿಹ್ವೆಗೆ ಆಸ್ವಾದನ, ನೇತ್ರಕ್ಕೆ ನೋಡೋಣ, ತ್ವಗಿಂದ್ರಿಯಕ್ಕೆ ಆಲಿಂಗನ. ಶ್ರೋತ್ರಕ್ಕೆ ಕೇಳೋಣ—ಈ ಪ್ರಕಾರ ಪಂಚ ಜ್ಞಾನೇಂದ್ರಿಯಗಳಿಗೆ ಇಂದ್ರಿಯಾರ್ಥಗಳ ತಿಳಿದು ತದಂತರ್ಗತ ಶ್ರೀಹರಿಗೆ ಸಮರ್ಪಣೆ.

ಪೃಥ್ವಿಯಿಂದ ಗಂಧ ಉತ್ಪತ್ತಿ, ಜಿಹ್ವೆಗೆ ರಸ, ಇಂದ್ರಿಯಾರ್ಥ ರಸ ವಿಷಯ, ತೇಜದಿಂದ ರೂಪ ಬಂದು ನಯನೇಂದ್ರಿಯಕ್ಕೆ ವಿಷಯವಾದದ್ದು. ವಾಯುವಿಂದ

* (ಸಂಸ್ಕೃತ ಪ್ರಯೋಗ) 'ಹೆಚ್ಚು ಹೇಳುವದೇನಿದೆ ?' ಎಂದರ್ಥ.

ಸ್ವರೂಪ ಉತ್ಪತ್ತಿ, ಸ್ಪರ್ಶ ತ್ವಗಿಂದ್ರಿಯಕ್ಕೆ ವಿಷಯ, ಆಕಾಶದಿಂದ ಶಬ್ದೋತ್ಪತ್ತಿ. ಶಬ್ದ ಶ್ರೋತ್ರೇಂದ್ರಿಯ ವಿಷಯಾರ್ಥ. ಪೃಥಿವ್ಯಾದಿ ಪಂಚಭೂತಗಳಿಂದ ಪಂಚ ತನ್ಮಾತ್ರ ಉತ್ಪತ್ತಿ. ಈ ಪಂಚತನ್ಮಾತ್ರ ಮೇಲೆ ಹೇಳಿದಂತೆ ಪಂಚ ಜ್ಞಾನೇಂದ್ರಿಯ ಗಳಿಗೆ ಇಂದ್ರಿಯಾರ್ಥ. ವಿಷಯಗಳನ್ನು ಭೋಗಿಸುವದು ತದಭಿಮಾನಿಗಳಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀನಾರಾಯಣಗೆ ಸಮರ್ಪಣೆ ಮಾಡಿದರೆ ಶ್ರೀಹರಿಗುರುಗಳವರು ನಿರ್ಲಿಪ್ತ ಮಾಡುವರು. ಹೀಗೆಯೇ ಪಂಚ-ಕರ್ಮೇಂದ್ರಿಯಗಳಿಂದಾಗೋ ಕರ್ಮ ತದಭಿಮಾನಿದೇವತೆಗಳಂತರ್ಗತ ಶ್ರೀಹರಿಗೆ ಸಮರ್ಪಣೆ ಮಾಡಬೇಕು. ವದನದಿಂದ ಏಕೋತ್ತರ ಪಂಚಾಶದ್ (೫೧) ವರ್ಣ ಉಚ್ಚಾರ ಮಾಡೋದು ಏಕೋತ್ತರ ಪಂಚಾಶದ್ ಭಗವದ್ರೂಪ ಸ್ಮರಣೆಪೂರ್ವಕ ಶ್ರೀಹರಿನಾಮಕೀರ್ತನೆ ಮಾಡಿ ಸಮರ್ಪಿಸಬೇಕು

ಈ ಪ್ರಕಾರ ಪಂಚ ಜ್ಞಾನೇಂದ್ರಿಯಗಳಿಂದ, ಪಂಚ ಕರ್ಮೇಂದ್ರಿಯ-ಗಳಿಂದಾಗೋ ಕರ್ಮ ತಿಳಿದು ದಶೇಂದ್ರಿಯಗಳಲ್ಲಿ ವ್ಯಾಪ್ತವಾದ ಮತ್ಸ್ಯಾದಿ ದಶಾವತಾರ ರೂಪಗಳ ತಿಳಿದು ಹೃದಯಾಂತರ್ಗತ ಶ್ರೀನಾರಾಯಣಗೆ ಸಮರ್ಪಿಸ-ಬೇಕು. ಇದನ್ನೇ ಶ್ರೀಹರಿಕಥಾಮೃತಸಾರದಲ್ಲಿ (ಸಂ ೧೮ ಪದ್ಯ ೩೫) ದಾಸರಾಯರು ಹೀಗೆ ಹೇಳಿದ್ದಾರೆ—"ಜ್ಞಾನ ಕರ್ಮೇಂದ್ರಿಯಗಳಿಂದೇ । ನೇನು ಮಾಡುವ ಕರ್ಮಗಳ ಲಕ್ಷ್ಮೀನಿವಾಸಗರ್ಪಿಸುತಲಿರು ಕಾಲಕಾಲದಲಿ ॥ ಪ್ರಾಣಪತಿ ಕೈಕೊಂಡು ನಾನಾ' ಯೋನಿಯೈದಿಸನೊಮ್ಮೆ ಕೊಡದಿರೆ । ದಾನವರು ಸೆಳೆದೊಯಿವರೆಲ್ಲಾ ಪುಣ್ಯರಾಶಿಗಳ ॥" ಹೀಗೆ ಏಕಾದಶೇಂದ್ರಿಯಗಳಲ್ಲಿ ತದಭಿಮಾನಿ ದೇವತೆಗಳಂತರ್ಗತ ಶ್ರೀಗುರುಮಧ್ವಾಂತರ್ಯಾಮಿ ಶ್ರೀಭೂದುರ್ಗಾರಮಣ ಶ್ರೀನಾರಾಯಣ ಸಕಲ ವಿಷಯಸಾರ ಭೋಗಿಸುವನೆಂದರಿವುದು.

ಮನಸ್ಸಿಗೆ ಮುಖ್ಯಾಭಿಮಾನಿ ಶ್ರೀಪಾರ್ವತೀಪತಿ ಶ್ರೀಮಹದೇವ-ರುದ್ರಾಂತರ್ಗತ ಶ್ರೀಲಕ್ಷ್ಮೀನೃಸಿಂಹಗೆ ಸಮರ್ಪಣೆ ಮಾಡಬೇಕು. ಹೀಗೆಯೇ ದಶೇಂದ್ರಿಯಾಭಿಮಾನಿ ದೇವತೆಗಳಂತರ್ಗತ ದಶಮತ್ಸ್ಯಾದಿ ರೂಪಗಳಿಗೆ ಅರ್ಪಿಸ-ಬೇಕು.

ತದ್ವಿವರ—

೧. ಶ್ರವಣಕ್ಕೆ ದಿಗ್ದೇವತೆಗಳಂತರ್ಗತ ............... ಮತ್ಸ್ಯರೂಪಿ ಪರಮಾತ್ಮ
೨. ನೇತ್ರಕ್ಕೆ ಸೂರ್ಯಾಂತರ್ಗತ .... .. ... ... .ಕೂರ್ಮ " "
೩. ತ್ವಗಿಂದ್ರಿಯಕ್ಕೆ ಅಹಂಕಾರಿಕ ಪ್ರಾಣಾಂತರ್ಗತ ವರಾಹ " "
೪. ರಸನೇಂದ್ರಿಯಕ್ಕೆ ವರುಣಾಂತರ್ಗತ........ ಶ್ರೀ ನೃಸಿಂಹ " "
೫. ನಾಸಿಕದಲ್ಲಿ ಅಶ್ವಿನೀದೇವತೆಗಳಂತರ್ಗತನಾದ....ವಾಮನ " "

೬. ವದನಕ್ಕೆ ಅಗ್ನ್ಯಂತರ್ಗತ ಪರಶುರಾಮ(ಭಾರ್ಗವ) ಮೂರ್ತಿ ರೂಪಿ ಪರಮಾತ್ಮ
೭. ಪಾಣಿಗೆ ದಕ್ಷ ಪ್ರಜೇಶ್ವರಂತರ್ಯಾಮಿ ಸೀತಾಪತಿ
ಶ್ರೀರಾಮಚಂದ್ರ " "
೮. ಪಾದದಲ್ಲಿ ಜಯಂತಾಂತರ್ಗತ ರುಕ್ಮಿಣೀಪತಿ ಶ್ರೀಕೃಷ್ಣ " "
೯. ಪಾಯುವಿನಲ್ಲಿ ಮಿತ್ರನಾಮಕ ಸೂರ್ಯಾಂತರ್ಗತ ಬೌದ್ಧ " "
೧೦. ಉಪಸ್ಥದಲ್ಲಿ ಮನುನಾಮಕ ದೇವತಾಂತರ್ಗತ ಕಲ್ಕಿ " "

ಹೀಗೆ ದಶೇಂದ್ರಿಯಗಳಲ್ಲಿ ಮತ್ಸ್ಯಾದಿ ದಶಾವತಾರಗಳು.

ಈ ಪ್ರಕಾರ ಏಕಾದಶೇಂದ್ರಿಯಗಳಲ್ಲಿ ಅಭಿಮಾನಿದೇವತೆಗಳನ್ನು ತದಂತರ್ಗತ ಭಗವದ್ರೂಪಗಳನ್ನು ತಿಳಿದು ಶ್ರೀಗುರುಗಳ ಮುಖಕಮಲದಿಂದ ಶ್ರವಣಮನನಾದಿಗಳ ಮಾಡಿ ಪೂರ್ವೋಕ್ತ ಪ್ರಕಾರ ಜ್ಞಾನ ಭಕ್ತಿ ಪುರಸ್ಸರ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಂದ ಅನುಭವಿಪ ವಿಷಯಗಳ ಶ್ರೀಭಾರತೀರಮಣಮುಖ್ಯ-ಪ್ರಾಣಾಂತರ್ಗತ ರಮಾವಲ್ಲಭ ಗರುಡಧ್ವಜ ಶ್ರೀನಾರಾಯಣನ ಚರಣಕಮಲಗಳಿಗೆ ಬಿಂಬಮೂರ್ತಿ ಸ್ಮರಣೆಪೂರ್ವಕ ಸಮರ್ಪಣೆ ಮಾಡುವದೇ ಫಲವಿದು. (ಈ ಪದ್ಯದಲ್ಲಿ "ದ್ವಾಸುಪರ್ಣಾ" ಶ್ರುತಿಯ ಅರ್ಥವನ್ನು ಹೇಳಿದ್ದಾರೆಂದು ತಿಳಿಯಬೇಕು.)

ವಿಷಯ-ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಂದ ಗ್ರಹಿಸಲ್ಪಡುವ ರೂಪ, ಶಬ್ದಾದಿಗಳಿಗೆ ವಿಷಯಗಳೆಂದು ಹೆಸರು. ಪಂಚಜ್ಞಾನೇಂದ್ರಿಯಗಳಿಗೆ ಗೋಚರವಾಗುವ ಐದು ವಿಷಯಗಳಿಗೆ ತನ್ಮಾತ್ರಗಳೆಂದು ಹೆಸರು. ಜಿಹ್ವೆಗೆ ರಸ, ತ್ವಕ್ಕಿಗೆ ಸ್ಪರ್ಶ. ಘ್ರಾಣಕ್ಕೆ (ಮೂಗಿಗೆ) ಗಂಧ. ಸುಮನಸರಲಿ (ಇಂದ್ರಿಯಾಭಿಮಾನಿ) ದೇವತೆಗಳಲ್ಲಿ. ಶ್ವಸನ-ವಾಯು. ಶ್ವಸನಾಂತರ್ಗತ-ಮುಖ್ಯಪ್ರಾಣಾಂತರ್ಗತ.

(ಭೀ.) ತದಭಿಮಾನಿ ಸುಮನಸರು-ತನ್ಮಾತ್ರಗಳ ಅಭಿಮಾನಿಗಳು ನಾಗ(ಶಬ್ದ), ಕೂರ್ಮ (ಸ್ಪರ್ಶ), ಕೃಕಲ (ರೂಪ), ದೇವದತ್ತ (ರಸ), ಧನಂಜಯ (ಗಂಧ). ಪಂಚಜ್ಞಾನೇಂದ್ರಿಯಗಳಿಗೆ-ಶ್ರೋತ್ರ-ದಿಗ್ದೇವತೆಗಳು, ತ್ವಕ್-ಅಹಂಕಾರಿಕ ಪ್ರಾಣ ಚಕ್ಷುಸ್-ಸೂರ್ಯ, ಜಿಹ್ವಾ-ವರುಣ, ಘ್ರಾಣ-ಅಶ್ವಿನೀದೇವತೆಗಳು. ಪಂಚಕರ್ಮೇಂದ್ರಿಯಗಳಿಗೆ—ವಾಕ್ಕಿಗೆ-ಅಗ್ನಿ, ಪಾಣಿ (ಕೈ)—ದಕ್ಷ, ಇಂದ್ರ, ಪಾದ-ಜಯಂತ. ಪಾಯು (ಗುದ)-ಯಮ, ಮಿತ್ರ, ಉಪಸ್ಥ (ಜನನೇಂದ್ರಿಯ) ಮನು, ಮನಸ್ಸಿಗೆ ಇಂದ್ರಕಾಮರು. ಅಹಂಕಾರ ತತ್ವಕ್ಕೆ ಗರುಡಶೇಷರುದ್ರರು. ಮಹತ್ತತ್ವಕ್ಕೆ ಬ್ರಹ್ಮವಾಯುಗಳು. ಅವ್ಯಕ್ತತತ್ವಕ್ಕೆ-ಸರಸ್ವತೀಭಾರತೀ ಹಾಗೂ ಲಕ್ಷ್ಮೀದೇವಿ, ಮತ್ತು "ಸರ್ವೇಂದ್ರಿಯಾಭಿಮಾನಿಸ್ಥ-ಮುಖ್ಯಪ್ರಾಣಸ್ಥ-ವಿಷ್ಣುನಾ। ಪ್ರೇರಿತಃ ಶ್ರೀಶತುಷ್ಟ್ಯರ್ಥಂ ಕರಿಷ್ಯೇ ಕರ್ಮ ಚಾಖಿಲಮ್॥" ಎಂಬಂತೆ ಗರುಡೇಂದ್ರಾದಿ

ಸಕಲೇಂದ್ರಿಯಾಭಿಮಾನಿಗಳಿಗೂ ಪ್ರೇರಕರು ವಾಯುದೇವರು. ಶ್ರೀಹರಿಯು ಆ ಮುಖ್ಯಪ್ರಾಣನಿಗೂ ಪ್ರೇರಕನಾಗಿದ್ದು ಸಕಲ ಪ್ರೇರಕನಾಗಿದ್ದಾನೆಂದು ತಿಳಿಯ ಬೇಕು. ಅಲ್ಲದೆ 'ಶುಭಂ ಪಿಬತ್ಯಸೌ-ನಿತ್ಯಂ ನಾಶುಭಂ ಸ ಹರಿಃ ಪಿಬೇತ್' ಎಂದು ಹೇಳಿದಂತೆ ಶ್ರೀಹರಿಯು ಶ್ರೋತ್ರಾದಿ ಇಂದ್ರಿಯಗಳಲ್ಲೂ ಮನಸ್ಸಿನಲ್ಲೂ ಇದ್ದು ಸಕಲ ಶುಭವಿಷಯಗಳನ್ನೂ ಭೋಗಿಸುತ್ತಾನೆಯೇ ಹೊರತು ಅಶುಭವನ್ನು ಸ್ವೀಕರಿಸುವುದಿಲ್ಲ.

ಪನ್ನಗಾಚಲ ಸನ್ನಿವಾಸ ಪಾ।
ವನ್ನ ಚರಿತ ಸದ್ಗುಣಭರಿತಾ॥
ಜನ್ಯ ಜನಕ ಲಾವಣ್ಯೈಕನಿಧಿ ಜ
ಗನ್ನಾಥವಿಠ್ಠಲಾನ್ಯಪ (ಅನನ್ಯಪ) ನೆಂಬುದೇ ॥೨೨॥

(ಈ ನುಡಿಗೆ ಈ ವ್ಯಾಖ್ಯಾನಕಾರರು ವ್ಯಾಖ್ಯಾನ ಬರೆದಿಲ್ಲವಾಗಿ ತೋರತದೆ. ನಮಗಂತೂ ಸಿಕ್ಕಿಲ್ಲ. ಆದಕಾರಣ ಇದರ ಯಥಾಮತಿ ಅರ್ಥ ಕೆಳಗೆ ಬರೆಯಲಾಗಿದೆ.)

ಪನ್ನಗ = ಹಾವು, ಶೇಷ. ಅಚಲ = ಪರ್ವತ. ಪನ್ನಗಾಚಲ = ಶೇಷಗಿರಿ ಅಥವಾ ವೇಂಕಟಾಚಲ, ವೇಂಕಟಾದ್ರಿ ಅಥವಾ ತಿರುಪತಿಯ ಬೆಟ್ಟ. ಅದರಲ್ಲಿ ಸನ್ನಿವಾಸ = ನೆಲೆಸಿರುವಂಥಾ, ತಿರುಪತಿಯ ಬೆಟ್ಟದಮೇಲೆ ನೆಲೆಸಿರುವಂಥಾ ಎಂದರ್ಥ; ಪಾವನ್ನಚರಿತ = ಪವಿತ್ರತಮವಾದ ಚರಿತ್ರೆಯುಳ್ಳಂಥಾ, ಸದ್ಗುಣ-ಭರಿತ = ಕಲ್ಯಾಣಗುಣಪರಿಪೂರ್ಣನಾದ, ಜನ್ಯಜನಕ— ಜನ್ಯ = ಜಗತ್ತಿನ ಸೃಷ್ಟಿಗೆ ಕಾರಣೀಭೂತನಾದವ ಅಥವಾ ಮಾತಾಪಿತ್ರಾದಿಗಳಲ್ಲಿದ್ದು ಜನ್ಯರಾದ ಪುತ್ರಾದಿಗಳ ಉತ್ಪತ್ತಿಗೆ ಕಾರಣನಾದ ಅಥವಾ ಸಕಲವಿಧವಾದ ಕಾರ್ಯಗಳಿಗೂ ಕಾರಣೀಭೂತ ನಾದ, ಲಾವಣ್ಯ + ಏಕನಿಧಿ = ಸೌಂದರ್ಯಸಾರನಾದ. ಜಗನ್ನಾಥವಿಠ್ಠಲ = ಸಕಲ ಜಗತ್ತಿಗೂ(ಬ್ರಹ್ಮಾಂಡಕ್ಕೂ) ಒಡೆಯನಾದ ಶ್ರೀಮನ್ನಾರಾಯಣನು, ಅನ್ಯ-ಪ = ಅನ್ಯ— ಸರ್ವಸ್ಮಾದ್ಭಿನ್ನನೂ ಸರ್ವವಿಲಕ್ಷಣನೂ, ಪ = ಸಕಲರ ಸಂರಕ್ಷಕನೂ (ಅಥವಾ ಅನನ್ಯಪ* = ಅನ್ಯರ ಅಧೀನನಲ್ಲದವನೂ (ಸ್ವತಂತ್ರನೂ) ಆಗಿದ್ದಾನೆ, ಎಂಬುದೇ = ಎಂದು ತಿಳಿದು ಉಪಾಸನೆ ಮಾಡುವದೇ, ಬಾಳ್ದುದಕೆ ಫಲವಿದು = ಬದುಕಿದ್ದಕ್ಕೆ ಸಾರ್ಥಕ್ಯ ಎಂದು ದಾಸರಾಯರು ಹೇಳಿದ್ದಾರೆಂದು ತಿಳಿಯುವುದು,

(ಗು) ಪನ್ನಗಾಚಲವಾಸ — ಪನ್ನಗ = ಶೇಷ. ಅಚಲ = ಪರ್ವತ, ಶೇಷಾಚಲದಲ್ಲಿ ಸನ್ನಿವಾಸ = ಸಮ್ಯಕ್ ಸಮೀಚೀನವಾಗಿ ನಿವಾಸಿಯಾದ

---

* ಅನ್ಯ-ಸರ್ವಸ್ಮಾದ್ಭಿನ್ನಃ ಸರ್ವವಿಲಕ್ಷಣಶ್ಚ
ಪಾತೀತಿ ಪಃ—ಸಂರಕ್ಷಕಃ । ಅನ್ಯಶ್ಚ ಪಶ್ಚ ಅನ್ಯಪಃ । ಅನ್ಯಃಪ= ಪಾಲಕ ಯಸ್ಯ ಸಃ ಅನ್ಯಪಃ = ಅಸ್ವತಂತ್ರ ಇತಿಯಾವತ್ । ನ ಅನ್ಯಪಃ = ಅನನ್ಯಪ = ಸ್ವತಂತ್ರಃ

ಶ್ರೀಪದ್ಮಾವತೀಪತಿ ಶ್ರೀಭೂವೈಕುಂಠಪತಿ ಶ್ರೀಶ್ರೀನಿವಾಸ, ಪಾವನ್ನಚರಿತ= ತ್ರಿಲೋಕಪಾವನ ಪವಿತ್ರರನ್ನ ಮಾಡುವಂಥ ಶ್ರೀವೇಂಕಟಶೈಲವಲ್ಲಭ, ಸದ್ಗುಣ–ಭರಿತ= ಸಮೀಚೀನವಾದ ಕೇವಲ ಸತ್ವಸತ್ವಪರಮಸತ್ವ ಎನಿಸುವ ಮಂಗಳಕರವಾದ ಗುಣವುಳ್ಳಂಥಾತ ಜನ್ಯಜನಕ= ಜಗತ್ತಿನಲ್ಲಿ ಸೃಷ್ಟರಾಗೋ ತ್ರಿಭುವನ ಜೀವರಿಗೆ ಸೃಷ್ಟಿಗೆ ಕಾರಣನಾದವ (ಬ್ರಹ್ಮಾದಿಜೀವರ ಅಸ್ಪೃಶ್ಯಕಾಲದಲ್ಲಿ ವ್ಯಾಪ್ತನಾಗಿ ಸೃಷ್ಟಿಗೆ ತಂದು ತದಂತರ್ಗತನಾಗಿ ಜನ್ಯನೆನಿಸುವಂಥಾ ಸ್ವಾಮಿ). ಜನಕ= ಚತುರ್ದಶಲೋಕ ಸೃಷ್ಟಿಮಾಡುವಂಥ ಜಗಜ್ಜನಕ, ಲಾವಣ್ಯೈಕನಿಧಿ-ಅನೇಕ ಅಲಂಕಾರವುಳ್ಳಂಥ ಗುಣಸಮುದ್ರ, ಜಗನ್ನಾಥವಿಠ್ಠಲ–ಬ್ರಹ್ಮಾಂಡ ಪಿಂಡಾಂಡ ಸಮಸ್ತಲೋಕಕ್ಕೆ ಸ್ವಾಮಿಯಾದ ಭಗವಂತ, ಅನನ್ಯಪನೆಂಬುದೆ-ಸ್ವಾಮಿಗೆ ಇನ್ನೊಬ್ಬರು ಪತಿಗಳಿಲ್ಲ. ಸರ್ವಾಂತರ್ಯಾಮಿ, ಎನ್ನಸ್ವಾಮಿ, ಸರ್ವಸ್ವಾಮಿ ಜಗತ್ಪತಿ ಎಂಬುದೇ ಫಲವಿದು ಬಾಳ್ದುದಕೆ. "ಮಂಗಳಮಹಾಮಧ್ವೇಶಾರ್ಪಣಮಸ್ತು. ಮದ್ಗುರುಗಳವರು ಕುಂಟೋಜಿ ದಾಸರಾಯ ಶ್ರೀಗುರುಗಳವರ ಚರಣಾರವಿಂದಗಳಿಗೆ ನಮೋನಮಃ। ನಮೋನಮಃ। ಶ್ರೀಗುರುಮಧ್ವೇಶಕೃಷ್ಣಾರ್ಪಣಮಸ್ತು"

(ಟೀ.) ೧. ಜನ್ಯಜನಕ-'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯು ಭಗವಂತನು ಸಕಲವನ್ನೂ ಸೃಷ್ಟಿಸಿದನೆಂದು ಹೇಳುತ್ತದೆ. ತ್ರಿಗುಣಾಭಿಮಾನಿಯಾದ ಲಕ್ಷ್ಮೀಗೆ ಕಾರ್ಯೋನ್ಮುಖಳಾಗುವುದೇ ಸೃಷ್ಟಿ....ವೈಕುಂಠಾದಿ ಲೋಕಗಳಿಗೆ ವ್ಯಕ್ತೀಕರಿಸಲ್ಪಡುವುದೇ ಸೃಷ್ಟಿ. ನಿತ್ಯರಾದ ಬ್ರಹ್ಮಾದಿಜೀವರಿಗೆ ಸಾಧನದೇಹ ಸಂಬಂಧವನ್ನು ಹೊಂದುವುದೇ ಸೃಷ್ಟಿ. ಹಾಗೆಯೇ ವಿವಿಧಾರ್ಥಗಳಲ್ಲಿ ಲಯವೂ ಅನೇಕ ವಿಧವಾಗಿದೆ. ೨. ಲಾವಣ್ಯಾನೇಕ "ಸೌಂದರ್ಯಸಾರೈಕರಸಂ ರಮಾಪತೇ, ರೂಪಂ ಸದಾ (ತದಾ) ನಂದಯತೀಹ ಮೋಕ್ಷಿಣಃ" ಎಂಬ ಸುಮಧ್ವವಿಜಯವಾಕ್ಯದಂತೆ (೧೦ ಸರ್ಗ ೭೫ ಶ್ಲೋ೯) ವೈಕುಂಠಾದಿಲೋಕಗಳಲ್ಲಿ ಶ್ರೀಹರಿಯು. ಸೌಂದರ್ಯಸಾರೈಕರಸನಾಗಿ ಸಂತತ ಮುಕ್ತರಿಗೆ ದರ್ಶನಭಾಗ್ಯವನ್ನು ಕರುಣಿಸುತ್ತಿರುತ್ತಾನೆ. ಏವಂಚ ಮುಕ್ತರ ಆನಂದಕ್ಕೆ ಶೃಂಗಾರಪೂರ್ಣ ಶ್ರೀಹರಿದರ್ಶನವೇ ಮುಖ್ಯಹೇತುವೆಂದು ತಿಳಿದುಬರುತ್ತದೆ,

ಶ್ರೀಕೃಷ್ಣಾರ್ಪಣಮಸ್ತು

|| ಓಂ ||

ಶ್ರೀ ಸಂಕರ್ಷಣ ಒಡೆಯರವರ ವೃಂದಾವನ

ಕರಪೂಂಡಿ–ಪೋಳೂರು ಮಾರ್ಗ, ಉತ್ತರ ಆರ್ಕಾಟ್ ಜಿಲ್ಲಾ



ಸಂಕರ್ಷಣಾಯತೀಂದ್ರಾಯ ಶಾಂತಾಯಾಮಲಚೇತಸೇ ।
ದಾಂತಾಯ ಭಜತಾಂ ಕಲ್ಪ—ತರವೇ ಗುರವೇ ನಮಃ ॥